ವೀರಶೈವ ಗ್ರಂಥಪ್ರಕಾಶಿಕಾ ಗ್ರಂಥಾವಳಿಯ ನಂ॥ ೩.

ಓಂ

ಶ್ರೀ ಭೋಜದೇವ ನೃಪತಿಕೃತ

# ತತ್ವಪ್ರಕಾಶಿಕಾ



ಎಂಬ ಗ್ರಂಥವು

ಶ್ರೀ ಪರ್ವತೇಶಕೃತ ಕರ್ಣಾಟಕ ಟೀಕಾ

ಸಹಿತವಾಗಿ



ವೀರಶೈವ ಗ್ರಂಥಪ್ರಕಾಶಿಕಾ ವಿದ್ವನ್ಮಂಡಲಿಯಿಂದ

ಪರಿಷ್ಕರಿಸಿ,

ಮುದ್ರಿಸಲ್ಪಟ್ಟಿತು.

PRINTED BY
J. M. MYSOREVALLA
AT THE G. T. A. PRESS, MYSORE.
1908.

# ಪೀಠಿಕೆ.

"ಸಾಂಖ್ಯಂಯೋಗಃಪಾಂಚರಾತ್ರಂ ವೇದಾಃಪಾಶುಪತಂತಥಾ | ಜ್ಞಾನಾನ್ಯೇತಾನಿ ಪಂಚೈವಜ್ಞೇಯಮುಖ್ಯೈಕೋಮಹೇಶ್ವರಃ" ಎಂಬ ಪದ್ಮಪುರಾಣ ವಚನಾನುಸಾರವಾಗಿ ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತ ಎಂಬಿವೈದೇ ಮುಖ್ಯಪ್ರಮಾಣಗಳು. ಅವುಗಳೊಳಗೆ ಪಾಶುಪತವು ವೈದಿಕವೆಂದೂ ಅವೈದಿಕವೆಂದೂ ಎರಡು ವಿಧವು. ಕಾಮಿಕಾದಿವಾತುಲಾಂತವಾದ ಸಿದ್ಧಾಂತವೆಂಬ ಶೈವಾಗಮವೇ "ವೈದಿಕಪಾಶುಪತ" ವೆಂದೂ, ತಪ್ತಲಿಂಗಾಂಕನ ಪ್ರತಿಪಾದಕಾಗಮವೇ "ಅವೈದಿಕಪಾಶುಪತ" ವೆಂದೂ ಪೂರ್ವಾಚಾರ್ಯರಿಂದ ನಿರ್ಣಯಿಸಲ್ಪಟ್ಟಿರುವುದು. ಮತ್ತೂ ಪಶು, ಪತಿ, ಪಾಶ, ವೆಂಬ ಪದಾರ್ಥತ್ರಯವಿಚಾರವು ಹೇಳಲ್ಪಡುವ ಶೈವಾಗಮಭಾಗಕ್ಕೆ "ಪಾಶುಪತ" ವೆಂದೂ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗಸಾಮರಸ್ಯ, ಎಂಬ ವಿಷಯಗಳನ್ನು ಬೋಧಿಸುವ ಶೈವಾಗಮಭಾಗಕ್ಕೆ "ವೀರಶೈವ" ವೆಂದೂ, "ವೀರಶೈವ ಧರ್ಮಶಿರೋಮಣಿ" ಯಲ್ಲಿ ಹೇಳಲ್ಪಟ್ಟಿರುವುದು. "ಸಾಂಖ್ಯಸ್ಯಪಾಂಚರಾತ್ರಸ್ಯಯೋಗಸ್ಯಚಮಹಾಮುನೇ| ವೇದೈಕದೇಶವರ್ತಿತ್ವಂ ಸಿದ್ಧಾಂತೋವೇದಸಮ್ಮತಃ ॥ ಸಿದ್ಧಾಂತವೇದಯೋರೈಕ್ಯಮೇಕಾರ್ಥಪ್ರತಿಪಾದನಾತ | ಪ್ರಾಮಾಣ್ಯಂಸದೃಶಂಜ್ಞೇಯಂ ಪಂಡಿತೈರೇತಯೋಸ್ಸದಾ" ಎಂಬ ಸಿದ್ಧಾಂತಶಿಖಾಮಣಿ ವಚನಾನುಸಾರವಾಗಿ ಸಿದ್ಧಾಂತವು ವೇದಸಮ್ಮತವೆನಿಸಿಕೊಳ್ಳುವುದು. ಈ "ತತ್ವಪ್ರಕಾಶಿಕೆ" ಯೆಂಬುದು ಅಂಥ ಪಾಶುಪತ ಸಿದ್ಧಾಂತ ಗ್ರಂಥವಾಗಿರುವುದು. ಈ ಸಿದ್ಧಾಂತಶಾಸ್ತ್ರದಲ್ಲಿ ಪೃಥ್ವೀತತ್ವ ಮೊದಲಾಗಿ ಶಿವತತ್ವಕಡೆಯಾದ ೩೬ ತತ್ವಗಳ, ಆ ತತ್ವಗಳಿಗೆ ಕರ್ತೃವಾದ ಪರಶಿವನ, ಮತ್ತೂ ಆ ತತ್ವಗಳಿಂದ ಪ್ರಯೋಜನವನ್ನೈದುವ ಆತ್ಮರುಗಳ ವಿಮರ್ಶೆಯು ಮಾಡಲ್ಪಟ್ಟಿರುವುದು. ಶಿವಾಐಕ್ಯ, ಷಡಧ್ವವಿಚಾರ, ತತ್ವಲಕ್ಷಣ, ಮೊದಲಾದವುಗಳನ್ನು ವೀರಶೈವರು ತಿಳಿಯುವುದಕ್ಕೆ ಪಾಶುಪತಪ್ರಕರಣವೇ ಸಾಧನವಾಗಿರುವಕಾರಣ, ಶ್ರೀ ಭೋಜದೇವನು ಶಿವಾಗಮಾರ್ಥವನ್ನು ಸಂಗ್ರಹಿಸಿ ಮಾಡಿದ್ದ ಈ "ತತ್ವಪ್ರಕಾಶಿಕೆ" ಗೆ ಶ್ರೀ ಅಘೋರಶಿವಾಚಾರ್ಯರು ವ್ಯಾಖ್ಯಾನವನ್ನು ಬರೆದಿರುವರು. ಕನ್ನಡವನ್ನರಿತವರೇ ವೀರಶೈವರಲ್ಲಿ ಹೆಚ್ಚಾಗಿರುವಕಾರಣ, ಅವರೆಲ್ಲರಿಗೂ ಇದರಿಂದ ಪ್ರಯೋಜನವುಂಟಾಗಬೇಕೆಂದು ಇದಕ್ಕೆ ನಿರಾಭಾರಿವೀರಶೈವರಾದ ಶ್ರೀ ಪರ್ವತೇಶ ಸ್ವಾಮಿಗಳು ಕನ್ನಡದ ಟೀಕೆಯನ್ನು ಬರೆದಿರುವರು. ವೀರಶೈವಮತಕ್ಕೆ ಪ್ರಯೋಜಕವಾದ ಇಂಥ ಪ್ರಕರಣಶಾಸ್ತ್ರವನ್ನು ಶ್ರೀ ಭೋಜದೇವನು ರಚಿಸಿದ್ದರಿಂದಲೇ ಕೃತಜ್ಞತಾಪ್ರದರ್ಶನರೂಪವಾಗಿ ಟೀಕಾಕಾರರು ಅವರನ್ನು ಆಚಾರ್ಯರೆಂದು ಆದಿಯಲ್ಲಿ ಸಂಬೋಧಿಸಿರುವರು. ಶ್ರೀ ಷಡಕ್ಷರಿ ಕವಿವರ್ಯರು ಸಹ ಅದೇ ಕಾರಣದಿಂದಲೇ ತಮ್ಮ ರಾಜಶೇಖರ ಗ್ರಂಥದ ಆದಿಯಲ್ಲಿ "ನುತಿಪೆಂ ವಿಶ್ರುತವೀರಶೈವಶ

ರಥಿಸ್ರೀ ಸೋಮನಂ ಸೋಮನಂ......ಪ್ರತತಾರಾಧಿತಶಂಕರೀರಮಣಪಾದಾಂಭೋಜನಂ ಭೋಜನಂ" ಎಂಬ ಪದ್ಯದಲ್ಲಿ ವೀರಶೈವಕವಿಗಳ ಪಙ್ಕ್ತಿಯಲ್ಲೇ ಇವರನ್ನೂ ಸೇರಿಸಿ, ಸ್ತೋತ್ರಮಾಡಿರುವರು. ಆ ಭೋಜನು ಈ ಆಚಾರ್ಯನೇ ಆಗಿರಬೇಕು. ಹೀಗೆ ಬಹುಕಾಲದಿಂದಲೂ ನಮ್ಮ ಪ್ರಾಚೀನಾಚಾರ್ಯರುಗಳಿಂದ ಮರ್ಯಾದಿಸಲ್ಪಟ್ಟಿರುವ ಈ ಪ್ರಕರಣಗ್ರಂಥವನ್ನು ಜೀರ್ಣವಾಗದಂತೆ ಉದ್ಧರಿಸುವುದು ಅತ್ಯವಶ್ಯಕವೆಂದು ತೋರಿದುದರಿಂದಲೇ ಇದನ್ನು "ವೀರಶೈವ ಗ್ರಂಥಪ್ರಕಾಶಿಕಾ" ಗ್ರಂಥಾವಳಿಯಲ್ಲಿ ಸೇರಿಸಿ ಮುದ್ರಿಸಲಾಯಿತು. ತತ್ತ್ವವಿಷಯವನ್ನು ಪ್ರತಿಪಾದಿಸುವ ಗ್ರಂಥಗಳು ಇನ್ನೂ ಕೆಲವಿದ್ದಾಗ್ಯೂ, ಇಷ್ಟು ಸಂಗ್ರಹವಾಗಿಯೂ ವಿಶದವಾಗಿಯೂ ನಿರೂಪಣಮಾಡಿರುವ ಅಚ್ಚುಗಟ್ಟಾದ ಗ್ರಂಥವು ಇದೊಂದೇ ಆಗಿರುವುದು. ಶೈವ ವೈಷ್ಣವಾದಿ ಮತದ ಪೂರ್ವಾಚಾರ್ಯರನೇಕರು ಈ ಗ್ರಂಥದ ವಚನಗಳನ್ನು ಹಲವು ಕಡೆಯಲ್ಲಿ ಪ್ರಮಾಣ್ಯವನ್ನಾಗಿ ಉಪಹರಿಸಿಕೊಂಡಿರುವುದರಿಂದ ಇದರ ಪ್ರಾಶಸ್ತ್ಯವು ಇನ್ನೂ ಚೆನ್ನಾಗಿ ವ್ಯಕ್ತವಾಗುವುದಲ್ಲದೆ, ಪ್ರಾಚೀನವೆಂದೂ ತೋರುವುದು.

ಈ ಗ್ರಂಥಕರ್ತೃವಾದ ಭೋಜದೇವನು ಮಾಳವದೇಶಾಧಿಪತಿಯಾದ ಭೋಜದೇವನಲ್ಲ. ಯೋಗಸೂತ್ರಕ್ಕೆ ವ್ಯಾಖ್ಯಾನವನ್ನು ಬರೆದಿರುವ ಭೋಜದೇವನೇ ಈತನಾರಬೇಕು. ಸಿದ್ಧಾಂತಮತಪ್ರವಿಷ್ಟನಾಗಿದ್ದ ಈ ಭೋಜದೇವನು ರಾಜನಾಗಿದ್ದನೆಂಬುದು ಗ್ರಂಥಾಂತ್ಯದಲ್ಲಿ "ಶ್ರೀ ಭೋಜದೇವನೃಪತಿರ್ವ್ಯಧತ್ತ ತತ್ತ್ವಪ್ರಕಾಶಂ ಸಃ" ಎಂದು ಹೇಳಿರುವ ಶ್ಲೋಕದಿಂದ ಗೊತ್ತಾಗುವುದು.

ಕರ್ಣಾಟಕ ಟೀಕಾಕಾರರಾದ ವಿರಕ್ತ ಪರ್ವತೇಶರ ಕಾಲವೂ ಸ್ಥಲವೂ ಸಹ ಗೊತ್ತಾಗಲಿಲ್ಲ. ಎಳಂದೂರಿನಲ್ಲಿ ೧೭ ನೇ ಶತಮಾನದಲ್ಲಿದ್ದ, ಪ್ರಭುಲಿಂಗಕಂದದ ಟೀಕೆ-ಏಕೋತ್ತರಶತಸ್ಥಲೀಟೀಕೆ-ನಾಗಲಿಂಗದೇವರ ತ್ರಿವಿಧಿಯ ಟೀಕೆ-ಮುರುಳುದೇವರ ಕಂದದಟೀಕೆ-ಗುರುಸ್ತೋತ್ರತ್ರಿವಿಧಿಯ ಟೀಕೆ-ಷಡ್ವಕ್ತ್ರಸ್ತೋತ್ರದ ಟೀಕೆ-ಮೊದಲಾದುವುಗಳನ್ನು ಬರೆದಿರುವ ಪರ್ವತಶಿವಯೋಗಿಗಳು ಇವರಲ್ಲ. ಏಕೆಂದರೆ—ಅವರು ಶ್ರೀ ಹರೀಶ್ವರ ಶಾಂತವೀರಸ್ವಾಮಿಗಳ ಶಿಷ್ಯರು. ಇವರಾದರೊ—ವಿರಕ್ತ ಶ್ರೀ ಚೆನ್ನವೀರಸ್ವಾಮಿಗಳ ಶಿಷ್ಯರು. ಇವರು "ಶತರತ್ನ" ವೆಂಬ ಸಿದ್ಧಾಂತಗ್ರಂಥಕ್ಕೆ ಕರ್ಣಾಟಕ ಟೀಕೆಯನ್ನು ಬರೆದಿರುತ್ತಾರೆ. ಇನ್ನಾವ ಗ್ರಂಥಗಳನ್ನು ಬರೆದಿರುತ್ತಾರೋ ತಿಳಿದಿಲ್ಲ.



ಓಂ.

ಶ್ರೀಗುರು ದಕ್ಷಿಣಾಮೂರ್ತಯೇನಮಃ.

——:o:——

# ತತ್ವಪ್ರಕಾಶಿಕಾ.

ಪ್ರಾರಭ್ಯತೇ.

ಆರ್ಯಾ॥ ಚಿದ್ಘನಏಕೋವ್ಯಾಪೀ ನಿತ್ಯಸ್ಸತತೋದಿತಃಪ್ರಭುಶ್ಶಾಂತಃ |
ಜಯತಿಜಗದೇಕಬೀಜಂ ಸರ್ವಾನುಗ್ರಾಹಕಶ್ಶಂಭುಃ ||

ಶ್ರೀಭೋಜರಾಜನೆಂಬ ಆಚಾರ್ಯನು ಶೈವಸಿದ್ಧಾಂತಶಾಸ್ತ್ರಾರ್ಥವನ್ನು ಪ್ರಕರಣವಾಗಿ ಪೇಳಲಿಚ್ಛೈಯುಳ್ಳಾತನಾಗಿ, ಆ ಪ್ರಕರಣವಂ ವಿಘ್ನವಿಲ್ಲದಂತೆ ಮುಗಿಸಲೋಸುಗವಾಗಿ, ಆ ಶೈವಸಿದ್ಧಾಂತಶಾಸ್ತ್ರವಂ ನಡೆಯಿಸುವುದಕ್ಕೆ ಕಾರಣನಾದ, ಸಕಲತತ್ವಾತೀತನಾದ, ನಿಷ್ಕಲನಾದ, ಪರಶಿವನನ್ನು ಮೊದಲು ಆರ್ಯಾವೃತ್ತದಿಂದ ಸ್ತೋತ್ರವಂ ಮಾಡುತ್ತ ಲಿಹನು.

ಟೀಕೆ: = ಚಿದ್ಘನಃ—ಜ್ಞಾನಕ್ರಿಯಾರೂಪವಾದ ಶಕ್ತಿಯೇ ಸ್ವರೂಪವಾಗಿಯುಳ್ಳವನು (ಕರ್ಮಕಾಲ ಮೊದಲಾದುವನ್ನು ಈಶ್ವರನೆಂದು ಹೇಳುವ ವಾದಿಗಳಿಗೆ ಹೇಗೋ ಹಾಗೆ ಜಡನಲ್ಲವೆಂಬುದರ್ಥ). ಏಕಃ—ಅದ್ವಿತೀಯನಾಗಿರ್ಪಾತನು, (ಅನೇಕೇಶ್ವರರಂ ಹೇಳುವುದು ಯುಕ್ತವಲ್ಲವೆಂಬುದರ್ಥ). ವ್ಯಾಪೀ—ಸರ್ವಗತನಾಗಿರ್ಪಾತನು, (ಜೈನರುಗಳು ಹೇಳುವಹಾಗೆ ಶರೀರವೆಲ್ಲ ವಾತ್ಮನಲ್ಲವೆಂಬುದರ್ಥ) ನಿತ್ಯಃ—ಅಳಿವಿಲ್ಲದಿರ್ಪಾತನು (ಬೌದ್ಧರುಗಳು ಹೇಳುವಹಾಗೆ ಕ್ಷಣಿಕನಲ್ಲವೆಂಬುದರ್ಥ.) ಸತತೋದಿತಃ—ನಿತ್ಯಮುಕ್ತನಾಗಿರ್ಪಾತನು (ಮುಕ್ತಾತ್ಮರುಗಳಹಾಗೆ ಮತ್ತೊಬ್ಬೀಶ್ವರನ ಪ್ರಸಾದದಿಂ ಮುಕ್ತನಲ್ಲವೆಂಬುದರ್ಥ) ಪ್ರಭುಃ—ಸ್ವತಂತ್ರಕರ್ತೃವಾಗಿರ್ಪಾತನು, ಶಾಂತಃ—ರಾಗದ್ವೇಷಗಳಿಲ್ಲದಿರ್ಪಾತನು, ಜಗದೇಕಬೀಜಂ—ಜಗತ್ತಿಗೆ ನಿಮಿತ್ತಕರ್ತೃವಾಗಿರ್ಪಾತನು, ಸರ್ವಾನುಗ್ರಾಹಕಃ—ಸಮಸ್ತಕ್ಕೆ ಅನುಗ್ರಾಹಕನಾಗಿರ್ಪಾತನು, (ಇಲ್ಲಿ ಅನುಗ್ರಹವೆಂಬುದು ಉಪಲಕ್ಷಣವು. ಅದರಿಂದ ಸೃಷ್ಟಿ ಸ್ಥಿತಿ ಸಂಹಾರ ತಿರೋಭಾವ ಅನುಗ್ರಹವೆಂಬ ಹೆಸರನುಳ್ಳ ಪಂಚಕೃತ್ಯಗಳಿಂದ

ಸರ್ವಾತ್ಮರುಗಳಿಗೆ ಭೋಗಮೋಕ್ಷವನ್ನು ಕೊಡುವನೆಂಬುದರ್ಥ) ಈ ಪ್ರಕಾರವಾಗಿ ರ್ಪನಂಥ, ಶಂಭುಃ—ಪರಮೇಶ್ವರನು, ಜಯತಿ—ಸರ್ವೋತ್ಕರ್ಷದಿಂದಿರುತ್ತಿಹನು. ॥

ಈ ಪ್ರಕಾರದಿಂದ ಧರ್ಮಿಸ್ವರೂಪನಾದ ಶಿವನನ್ನು ಸ್ತೋತ್ರಮಾಡಿ, ಧರ್ಮ ಸ್ವರೂಪವಾಗಿರ್ಪ ಆತನ ಶಕ್ತಿಯ ಲಯಾವಸ್ಥೆಯನ್ನು ಸ್ತೋತ್ರವೆಂಬ ನೆವದಿಂದ ತೋರಿಸುತ್ತಿಹನು.

ಶ್ಲೋ॥ ನೋದಯತಿಯನ್ನನಶ್ಯತಿ ನಿರ್ವ್ಯಾತಿಚನಿರ್ವೃತಿಂಪ್ರಯಚ್ಛತಿಚ।
ಜ್ಞಾನಕ್ರಿಯಾಸ್ವಭಾವಂ ತತ್ತೇಜಶ್ಶಾಂಭವಂಜಯತಿ ॥೧॥

ಟೀ॥ ಯತ್—ಆವುದಾನೊಂದು ತೇಜಸ್ಸು, ನೋದಯತಿ—ಉತ್ಪತ್ತಿಯನ್ನು ಹೊಂದದು, ನನಶ್ಯತಿ—ಕೆಡುತ್ತಿರದು, ನ ನಿರ್ವಾತಿಚ—ಆರಿಂದಲೂ ಬಿಡಿಸಿಕೊಳ್ಳುತ್ತಿರದು, ನಿರ್ವೃತಿಂಚ—ಮೋಕ್ಷವನ್ನೂ, ಪ್ರಯಚ್ಛತಿ—ಕೊಡುತ್ತಿಹುದು, ಜ್ಞಾನಕ್ರಿಯಾಸ್ವಭಾವಂ—ಜ್ಞಾನಕ್ರಿಯೆಗಳ ಸ್ವರೂಪವಾಗಿರ್ಪ, ಶಾಂಭವಂ—ಪರಮೇಶ್ವರನ ಸಂಬಂಧವಾಗಿರ್ಪ, ತತ್ತೇಜಃ—ಆ ಸಾಮರ್ಥ್ಯವು, ಜಯತಿ—ಸರ್ವೋತ್ಕರ್ಷದಿಂ ವರ್ತಿಸುತ್ತಿಹುದು.

ಅಧಿಕಾರಾವಸ್ಥೆಯಲ್ಲಿಯೂ ಶಿವಂಗೆ ಶಕ್ತಿಯೇ ಕರಣವೆಂಬುದನ್ನು ಹೇಳುತಲೂ ಆ ಶಕ್ತಿಗೆ ನಮಸ್ಕಾರವನ್ನು ಮಾಡುತ್ತಿಹನು.

ಶ್ಲೋ॥ ಶಕ್ತೋಯಯಾಸಶಂಭುರ್ಭುಕ್ತೌ ಮುಕ್ತೌ ಚ ಪಶುಗಣಸ್ಯಾಸ್ಯ।
ತಾಮೇಕಾಂಚಿದ್ರೂಪಾಮಾದ್ಯಾಂ ಸರ್ವಾತ್ಮನಾಸ್ಮಿ ನತಃ ॥೨॥

ಟೀ॥ ಸಶಂಭುಃ—ಆ ಪರಮೇಶ್ವರನು, ಯಯಾ—ಆವುದಾನೊಂದು ಶಕ್ತಿಯಿಂದ, ಅಸ್ಯಪಶುಗಣಸ್ಯ—ಈ ಆತ್ಮಸಮೂಹದ, ಭುಕ್ತೌ—ಭೋಗದಲ್ಲಿಯೂ, ಮುಕ್ತೌಚ – ಮೋಕ್ಷದಲ್ಲಿಯೂ ಕೂಡ, ಶಕ್ತಃ—ಸಮರ್ಥನಾಗುತ್ತಿಹನು, ಏಕಾಂ—ಅದ್ವಿತೀಯವಾದ, ಚಿದ್ರೂಪಾಂ—ಜ್ಞಾನಕ್ರಿಯಾರೂಪವಾದ, ಆದ್ಯಾಂ—ಮುಖ್ಯವಾದ, ತಾಂ—ಆಶಕ್ತಿಯನ್ನು, ಸರ್ವಾತ್ಮನಾ—ಸರ್ವಪ್ರಕಾರದಿಂದ, ನತಃ—ನಮಸ್ಕರಿಸಿದಂಥಾತನು, ಅಸ್ಮಿ—ಆಗುತ್ತಿದ್ದೇನೆ. ॥೨॥

ಈಗ ಪ್ರಕರಣದಲ್ಲಿ ಹೇಳುವ ಅರ್ಥವನ್ನು ಪ್ರತಿಜ್ಞೆಯಂ ಮಾಡುತ್ತಿಹನು—

ಶ್ಲೋ॥ ಲೋಕಾನುಗ್ರಹ ಹೇತೋಃ ಕರುಣಾರಸನಿರ್ಭರೇಣಚಿತ್ತೇನ।
ತತ್ವಪ್ರಕಾಶಏಷಃ ಕ್ರಿಯತೇऽಸ್ಮಾಭಿಸ್ಸಮಾಸೇನ ॥೩॥

ಟೀ॥ ಲೋಕಾನುಗ್ರಹಹೇತೋಃ — ಜನರುಗಳ ರಕ್ಷಿಸುವುದಕ್ಕೋಸುಗವಾಗಿ, ಕರುಣಾರಸನಿರ್ಭರೇಣ—ಕೃಪಾರಸಭರಿತವಾದ, ಚಿತ್ತೇನ—ಮನಸ್ಸಿಂದ, ಏಷಃತತ್ವಪ್ರಕಾಶಃ—ಈ ತತ್ವಂಗಳ ಜ್ಞಾನವು, ಅಸ್ಮಾಭಿಃ—ನಮ್ಮಿಂದ, ಸಮಾಸೇ

ನ—ಸಂಕ್ಷೇಪದಿಂದ, ಕ್ರಿಯತೆ--ಮಾಡಲ್ಪಡುತ್ತದೆ. (ಇಲ್ಲಿ ತತ್ವ ಶಬ್ದವು ಉಪಲಕ್ಷಣವು. ಆದರಿಂದ ಪೃಥ್ವಿ ಮೊದಲಾದ ಶಿವತತ್ವಕಡೆಯಾದ ತತ್ವಂಗಳ, ಆ ತತ್ವಂಗಳಿಗೆ ಕರ್ತೃವಾದ ಪರಶಿವನ, ಆ ತತ್ವಂಗಳಿಂದ ಉಪಕರಿಸಿಕೊಂಬ ಆತ್ಮರುಗಳ, ಪ್ರಕಾಶವು ಮಾಡಲ್ಪಡುತ್ತಿಹುದೆಂಬುದರ್ಥ. ||೪||

ಪ್ರಕಾಶಿಸಲು ತಕ್ಕಂಥ ಆ ಪದಾರ್ಥಂಗಳನ್ನು ಉದ್ದೇಶಿಸುತ್ತಿಹನು:—

ಶ್ಲೋ|| ಶೈವಾಗಮೇಷುಮುಖ್ಯಂ ಪತಿ ಪಶು ಪಾಶಾ ಇತಿ ಕ್ರಮಾತ್ತ್ರಿತಯಂ |
ತತ್ರ ಪತಿಶ್ಶಿವಉಕ್ತಃ ಪಶವೋಹ್ಯಣವೋಽರ್ಥ ಪಂಚಕಂಪಾಶಃ||೫

ಟೀ|| ಶೈವಾಗಮೇಷು— ಶಿವಾಗಮಂಗಳಲ್ಲಿ, ಪತಿಪಶುಪಾಶಾಇತಿ — ಪತಿಪಶುಪಾಶಂಗಳೆಂಬ, ಕ್ರಮಾತ್ —ಕ್ರಮದದೆಸೆಯಿಂದ, ತ್ರಿತಯಂ— ಪದಾರ್ಥತ್ರಯುವು, ಮುಖ್ಯಂ— ಮುಖ್ಯವಾಗಿಹುದು. ತತ್ರ— ಆ ಮೂರು ಪದಾರ್ಥಂಗಳಲ್ಲಿ, ಪತಿಃ-ಪತಿಪದಾರ್ಥವು, ಶಿವಃ--ಶಿವನೆಂದು, ಉಕ್ತಃ —ಹೇಳಲ್ಪಟ್ಟಿತು; ಪಶವಃ—ಪಶುಗಳು, ಅಣವಃ—ಆತ್ಮಗಳೆಂದು, ಹಿ -ಪ್ರಸಿದ್ಧವು; ಅರ್ಥಪಂಚಕಂ—ಮಲ ಮೊದಲಾದ ಪದಾರ್ಥಪಂಚಕವು, ಪಾಶಃ—ಪಾಶಪದಾರ್ಥವು. ||೫||

ಮುಕ್ತಾತ್ಮರುಗಳು ಶಿವಶಬ್ದದಿಂದ ಹೇಳಿಸಿಕೊಂಬರೆಂದು ಹೇಳುತ್ತಿಹನು:—

ಶ್ಲೋ|| ಮುಕ್ತಾತ್ಮಾನೋಪಿಶಿವಾಃಕಿಂತ್ವೇತೇತತ್ಪ್ರಸಾವತೋಮುಕ್ತಾಃ
ಸೋಽನಾದಿಮುಕ್ತಏಕೋ ವಿಜ್ಞೇಯಃ ಪಂಚ ಮಂತ್ರತನುಃ ||

ಟೀ|| ಮುಕ್ತಾತ್ಮಾನೋಪಿ—ಪರಾಪರಮುಕ್ತರುಗಳೂ ಕೂಡ, ಶಿವಾಃ—ಶಿವಸ್ವರೂಪರು; ಕಿಂತು—ಶಿವಂಗೂ ಇವರಿಗೂ ಭೇದವಾವುದೆಂದೊಡೆ, ಏತೆ—ಈ ಮುಕ್ತಾತ್ಮರುಗಳು, ತತ್ಪ್ರಸಾದತಃ—ಆ ಪರಶಿವನ ಪ್ರಸಾದದ ದೆಸೆಯಿಂದ, ಮುಕ್ತಾಃ—ಮುಕ್ತರಾದವರುಗಳು; ಸಏಕಃ -ಆ ಪರಶಿವನೊಬ್ಬನೇ, ಅನಾದಿ ಮುಕ್ತಃ—ಅನಾದಿಮುಕ್ತನು; ಪಂಚಮಂತ್ರತನುಃ—ಪಂಚಮಂತ್ರ ರೂಪವಾದ ಈಶಾನಾದಿ ಪಂಚಶಕ್ತಿಗಳೇ ಶರೀರವಾಗಿಯುಳ್ಳಾತನೆಂದು, ವಿಜ್ಞೇಯಃ—ಅರಿಯಲು ತಕ್ಕಾತನು. (ಈ ಈಶಾನಾದಿ ಪಂಚಶಕ್ತಿಗಳು ಪಂಚಕೃತ್ಯಕ್ಕೆ ಉಪಕಾರಿಗಳಾದಕಾರಣ, ಉಪಚಾರದಿಂದ ತನುವೆನಿಸಿಕೊಂಬುವು. ಅದುಕಾರಣದಿಂದ ಪರಶಿವನು ಬೈಂದವಾದಿ ಶರೀರಸಂಬಂಧವಿಲ್ಲದೆ ಇರ್ಪಾತನು. ||೬||

ಆ ಪಂಚಶಕ್ತಿಗಳಿಂದ ಶಿವನು ಮಾಡುವ ಪಂಚಕೃತ್ಯವನ್ನು ಹೇಳುತ್ತಿಹನು:--

ಶ್ಲೋ|| ಪಂಚವಿಧಂ ತತ್ಕೃತ್ಯಂ ಸೃಷ್ಟಿಸ್ಥಿತಿಸಂಹೃತಿ ತಿರೋಭಾವಾಃ |
ತದ್ವದನುಗ್ರಹಕರಣಂಪ್ರೋಕ್ತಂ ಸತತೋದಿತಸ್ಯಾಸ್ಯ ||೭||

ಟೀ॥ ತತ್ಕೃತ್ಯಂ—ಆ ಪರಮೇಶ್ವರನ ಕಾರ್ಯವು, ಪಂಚವಿಧಂ—ಐದು ಪ್ರಕಾರವಾಗಿಹುದು; ಸೃಷ್ಟಿ ಸ್ಥಿತಿ ಸಂಹೃತಿ ತಿರೋಭಾವಾಃ—ಸೃಷ್ಟಿ—ಸೃಷ್ಟಿಯೆಂದು, ಸ್ಥಿತಿ—ಸ್ಥಿತಿಯೆಂದು, ಸಂಹೃತಿ—ಸಂಹಾರವೆಂದು, ತಿರೋಭಾವಾಃ—ತಿರೋಭಾವಗಳೆಂದು, ತದ್ವತ್—ಹಾಗೆ, ಅನುಗ್ರಹಕರಣಂ—ಅನುಗ್ರಹವನ್ನು ಮಾಡುವುದು, ಈ ಐದು ಕೃತ್ಯವು, ಸತತೋದಿತಸ್ಯ—ನಿತ್ಯಮುಕ್ತನಾಗಿರ್ಪ, ಆಸ್ಯ—ಈತಂಗೆ ಎಂದು, ಪ್ರೋಕ್ತಂ—ಹೇಳಲ್ಪಟ್ಟಿತು. (ಸೃಷ್ಟ್ಯಾದಿ ಪಂಚಕೃತ್ಯದ ವಿವರವೆಂತೆಂದೊಡೆ.—ಬಿಂದುವೆಂಬ ಉಪಾದಾನದ ದೆಸೆಯಿಂದ ಶುದ್ಧತತ್ವ ಭುವನವು ಭುವನಜದೇಹಂಗಳನ್ನೂ, ನಾದಾದಿದ್ವಾರದಿಂದ ಶಬ್ದಾದಿಗಳನ್ನೂ ಹುಟ್ಟಿಸುವುದು ಶುದ್ಧಾಧ್ವದಲ್ಲಿಯ ಸೃಷ್ಟಿ. ಮಾಯೆಯೆಂಬುಪಾದಾನದ ದೆಸೆಯಿಂದ ಅಶುದ್ಧತತ್ವಭುವನವು ಸೂಕ್ಷ್ಮದೇಹಸ್ಥೂಲದೇಹಂಗಳನ್ನು ಹುಟ್ಟಿಸುವುದು ಅಶುದ್ಧಾಧ್ವದಲ್ಲಿಯ ಸೃಷ್ಟಿ. ಈ ಹುಟ್ಟಿಸಿದಂಥಾ ಜಗತ್ತನ್ನು ಅವರವರ ವಿಷಯದಲ್ಲಿರಿಸಿಕೊಂಡಿಹುದು ಸ್ಥಿತಿ. ಶುದ್ಧತತ್ವ ಭುವನ ಮೊದಲಾದುವನ್ನು ಬಿಂದುವಿನಲ್ಲಿ ಅಡಗಿಸುವುದೂ,-ಅಶುದ್ಧತತ್ವಭುವನಾದಿಗಳನ್ನು ಮಾಯೆಯಲ್ಲಿ ಅಡಗಿಸುವುದೂ ಸಂಹಾರವು. ಪಾಶಂಗಳನ್ನು ತಮ್ಮ ತಮ್ಮ ವ್ಯಾಪಾರದಲ್ಲಿ ಸಾಮರ್ಥ್ಯವುಳ್ಳಂಥವುಗಳನ್ನು ಮಾಡಿ, ಆತ್ಮರುಗಳಿಗೆ ಭೋಗವನ್ನು ಮಾಡುವುದು ತಿರೋಭಾವವು. ಮಲ ಮೊದಲಾದ ಪಾಶಂಗಳನ್ನು ತೊಲಗಿಸಿ, ಆತ್ಮರುಗಳಿಗೆ ಸರ್ವಜ್ಞತ್ವ ಸರ್ವಕರ್ತೃತ್ವರೂಪವಾದ ಶಿವತ್ವವನ್ನು ಪ್ರಕಟಿಸಿ, ಪರಾಪರಮೋಕ್ಷವನ್ನು ಕೊಡುವುದು ಅನುಗ್ರಹವು. ಈ ಪ್ರಕಾರವಾದ ಪಂಚಕೃತ್ಯವನ್ನು ಪರಶಿವನು ಶುದ್ಧಾಧ್ವದಲ್ಲಿ ತಾನೇ ತನ್ನ ಸಂಕಲ್ಪದಿಂದ ಮಾಡುವನು. ಮಿಶ್ರಾಧ್ವದಲ್ಲಿ ಅನಂತೇಶ್ವರನಿಂದ ಮಾಡಿಸುವನು. ಅಶುದ್ಧಾಧ್ವದಲ್ಲಿ ಶ್ರೀಕಂಠೇಶ್ವರನಿಂದ ಮಾಡಿಸುವನೆಂದು ತಿಳಿದುಕೊಂಬುದು. ॥೭॥

ಈ ಪ್ರಕಾರದಲ್ಲಿ ಪತಿಪದಾರ್ಥದ ಭೇದವನ್ನು ಹೇಳಿ, ಪಶುಪದಾರ್ಥಭೇದವನ್ನು ಹೇಳುತ್ತಿಹನು:—

ಶ್ಲೋ॥ ಪಶವಸ್ತ್ರಿವಿಧಾಜ್ಞೇಯಾ ವಿಜ್ಞಾನಪ್ರಳಯಕೇವಲಾಸ್ಸಕಲಃ।
ಮಲಯುಕ್ತಸ್ತತ್ರಾದ್ಯೋಮಲಕರ್ಮಯುತೋದ್ವಿತೀಯಸ್ಸ್ಯಾತ್

ಟೀ॥ ಪಶವಃ—ಪಶುಗಳು, ತ್ರಿವಿಧಾಃ—ಮೂರು ಪ್ರಕಾರವಾಗಿರ್ಪರುಗಳೆಂದು, ಜ್ಞೇಯಾಃ—ಅರಿಯಲ್ತಕ್ಕವರುಗಳು; ವಿಜ್ಞಾನಪ್ರಳಯಕೇವಲಾಃ—ವಿಜ್ಞಾನಕೇವಲ ಪ್ರಳಯಕೇವಲರುಗಳೆಂದು, ಸಕಲಃ—ಸಕಲನೆಂದು. ತತ್ರ—ಆ ಮೂವರೊಳಗೆ, ಆದ್ಯಃ—ಮೊದಲವಿಜ್ಞಾನಕೇವಲವರ್ಗವು, ಮಲಯುಕ್ತಃ-ಮಲವೆಂಬ ಪಾಶದೊಡನೆ ಕೂಡಿಹುದು; ದ್ವಿತೀಯಃ—ಎರಡನೆಯ ಪ್ರಳಯಕೇವಲವೆಂಬ ವರ್ಗವು; ಮಲಕರ್ಮಯುತಃ—ಮಲಕರ್ಮವೆಂಬ ಪಾಶದ್ವಯದೊಡನೆ ಕೂಡಿಹುದು, ಸ್ಯಾತ್—ಆಹುದು. ॥೮॥

ಶ್ಲೋ॥ ಮಲಮಾಯಾಕರ್ಮಯುತಸ್ಸಕಲಸ್ತೇಷುದ್ವಿಧಾಭವೇದಾದ್ಯಃ ।
ಆದ್ಯಸ್ಸಮಾಪ್ತಕಲುಷೋಽಸಮಾಪ್ತಕಲುಷೋದ್ವಿತೀಯಸ್ಸ್ಯಾತ್ ॥೯॥

ಟೀ॥ ಸಕಲಃ—ಸಕಲವೆಂಬ ವರ್ಗವು, ಮಲಮಾಯಾಕರ್ಮಯುತಃ:ಮಲಮಾಯಾ—ಕರ್ಮಗಳೆಂಬ ಪಾಶತ್ರಯದೊಡನೆ ಕೂಡಿಹುದು; ತೇಷು—ಆ ಮೂರು ವರ್ಗಂಗಳೊಳಗೆ, ಆದ್ಯಃ—ಮೊದಲವಿಜ್ಞಾನಕೇವಲವೆಂಬ ವರ್ಗವು, ದ್ವೇಧಾ—ಮತ್ತೆಯೂ ಎರಡು ಪ್ರಕಾರವಾಗಿಹುದು, ಭವೇತ್—ಅಹುದು. ಆ ಎರಡು ಪ್ರಕಾರವಾವುವೆಂದೊಡೆ—ಆದ್ಯಃ—ಮೊದಲವರ್ಗವು, ಸಮಾಪ್ತಕಲುಷಃ—ಪರಿಪಕ್ವವಾದ ಮಲವುಳ್ಳಂತಹದು, ದ್ವಿತೀಯಃ—ಎರಡನೆಯ ಭಾಗವು, ಅಸಮಾಪ್ತಕಲುಷಃ—ಒಪ್ಪಜ್ಜಿಪರಿಪಕ್ವವಾದ ಮಲವುಳ್ಳಂತಹದು, ಸ್ಯಾತ್—ಅಹುದು. ॥೯॥

ಶ್ಲೋ॥ ಆದ್ಯಾನನುಗೃಹ್ಯಶಿವೋವಿದ್ಯೇಶತ್ವೇನಿಯೋಜಯತ್ಯಷ್ಟೌ ।
ಮಂತ್ರಾಂಶ್ಚಕರೋತ್ಯಪರಾಂಸ್ತೇಚೋಕ್ತಾಃಕೋಟಯಸ್ಸಪ್ತ ॥

ಟೀ॥ ಶಿವಃ—ಪರಶಿವನು, ಆದ್ಯಾನ್—ಸಮಾಪ್ತಕಲುಷರಾಗಿದ್ದಂಥವರುಗಳನ್ನು, ಅನುಗೃಹ್ಯ—ಮಲವ ತೊಲಗಿಸಿ ಸರ್ವಜ್ಞತ್ವಾದಿ ಯುಕ್ತರುಗಳನ್ನು ಮಾಡಿ, ಅಷ್ಟೌ—ಅನಂತೇಶ್ವರ ಮೊದಲಾದ ಎಂಟನ್ನೂ, ವಿದ್ಯೇಶತ್ವೇ—ವಿದ್ಯೇಶ್ವರಪದವಿಯಲ್ಲಿ, ನಿಯೋಜಯತಿ—ಕೂಡಿಸುತ್ತಿಹನು. ಅಪರಾಂಶ್ಚ—ಅಸಮಾಪ್ತಕಲುಷರಾಗಿದ್ದವರುಗಳನ್ನು, ಮಂತ್ರಾನ್—ಮಂತ್ರಂಗಳನ್ನು, ಕರೋತಿ—ಮಾಡುತ್ತಿಹನು. ತೇಚ—ಆ ಮಂತ್ರಂಗಳಾದರೋ, ಸಪ್ತಕೋಟಯಃ—ಏಳುಕೋಟಿಗಳೆಂದು ಉಕ್ತಾಃ—ಹೇಳಲ್ಪಟ್ಟುವು. ॥೧೦॥

ಶ್ಲೋ॥ ಪ್ರಳಯಾಕಲೇಷುಯೇಷಾಂಪಕ್ವೇಮಲಕರ್ಮಣೀವ್ರಜಂತ್ಯನ್ಯೇ ।
ಪುರ್ಯಷ್ಟಕದೇಹಯುತಾಯೋನಿಷುನಿಖಿಲಾಸುಕರ್ಮವಶಾತ್ ॥೧೧॥

ಟೀ॥ ಪ್ರಳಯಾಕಲೇಷು—ಪ್ರಳಯದಲ್ಲಿ ಅಕಲರುಗಳಾಗಿದ್ದಾತ್ಮರುಗಳ ಮಧ್ಯದಲ್ಲಿ, ಯೇಷಾಂ—ಆರಿಗೆ, ಮಲಕರ್ಮಣೀ—ಮಲಕರ್ಮಂಗಳು, ಪಕ್ವೇ—ಪರಿಪಕ್ವಗಳಾಗಿಪವೋ, ಅವರುಗಳು, ವ್ರಜಂತಿ—ಮೋಕ್ಷವನ್ನೈದುತ್ತಿಹರು. ಅನ್ಯೇ—ಅಪಕ್ವವಾದ ಮಲಕರ್ಮವುಳ್ಳಂಥವರುಗಳು, ಪುರ್ಯಷ್ಟಕದೇಹಯುತಾಃ—ಸೂಕ್ಷ್ಮಶರೀರಗಳೊಡನೆ ಕೂಡಿದವರಾಗಿ, ಕರ್ಮವಶಾತ್—ತಮ್ಮ ಕರ್ಮಾಧೀನದ ದೆಸೆಯಿಂದ, ನಿಖಿಲಾಸು—ಸಮಸ್ತಗಳಾದ, ಯೋನಿಷು—ಭುವನಜದೇಹಂಗಳಲ್ಲಿ, ವ್ರಜಂತಿ—ಎಯ್ದುತ್ತಿಹರು. (ಈ ಪುರ್ಯಷ್ಟಕದೇಹವೆಂಬುದು ಸೂಕ್ಷ್ಮಶರೀರವು. ಇದರೊಡನೆ ಕೂಡಲ್ಪಟ್ಟವರುಗಳು ಸಕಲರೆಂಬುದರ್ಥ). ॥೧೧॥

ಆ ಪುರ್ಯಷ್ಟಕದೇಹವಾವುದೆಂದೊಡೆ, ಹೇಳುತ್ತಿಹನು:—

ಶ್ಲೋ॥ ಸ್ಯಾತ್ಪುರ್ಯಷ್ಟಕಮಂತಃಕರಣಂಧೀಃಕರ್ಮಕರಣಾನಿ ।
ಕಾಂಶ್ಚಿದನುಗೃಹ್ಯವಿತರತಿಭುವನಪತಿತ್ವಂಮಹೇಶ್ವರಸ್ತೇಷಾಂ ॥

ಟೀ॥ ಅಂತಃಕರಣಂ—ಅಂತಃಕರಣಶಬ್ದದಿಂದ ಮನ, ಬುದ್ಧಿ, ಅಹಂಕಾರ, ಗಳೆಂಬ ಮೂರು ತತ್ವಂಗಳು, ಪುರುಷನ ಭೋಗಕ್ರಿಯೆಯಲ್ಲಿ ಅಂತರಂಗಗಳಾಗಿದ್ದ ಕಲಾ ಕಾಲ ನಿಯತಿ ವಿದ್ಯೆ ರಾಗ ಪ್ರಕೃತಿ ಗುಣಂಗಳೆಂಬ ಏಳು ತತ್ವಗಳು, ಉಪಲಕ್ಷಿಸಲ್ಪಡುತ್ತಿಹವು; ಧೀಃಕರ್ಮಕರಣಾನಿ—ಧೀಕರ್ಮಶಬ್ದದಿಂದ ಬುದ್ಧಿಯಿಂದ ನಿಶ್ಚೈಸಿಕೊಂಬ ಆಕಾಶಾದಿ ಪಂಚಭೂತಂಗಳು, ಅವಕ್ಕೆ ಕಾರಣವಾದ ಶಬ್ದಾದಿಪಂಚತನ್ಮಾತ್ರಂಗಳು ಹೇಳಲ್ಪಡುತ್ತಿಹವು, ಕರಣಶಬ್ದದಿಂದ ಶ್ರೋತ್ರಾದಿಪಂಚಜ್ಞಾನೇಂದ್ರಿಯಂಗಳು, ವಾಗಾದಿಪಂಚಕರ್ಮೇಂದ್ರಿಯಂಗಳು, ಹೇಳಲ್ಪಡುತ್ತಿಹವು; ಇವುಗಳು, ಪುರ್ಯಷ್ಟಕಂ—ಪುರ್ಯಷ್ಟಕವೆಂದು, ಸ್ಯಾತ್—ಅಹುದು; ಅದುಕಾರಣ, ಪುರ್ಯಷ್ಟಕದೇಹವೆಂದರೆ—ಸೃಷ್ಟಿತೊಡಗಿ ಪ್ರಳಯಪರ್ಯಂತವಾಗಿ ಮೋಕ್ಷಾಂತವಾಗಿಯಾದರೂ ಇರ್ಪ ಪೃಥ್ವಿ ಮೊದಲು ಕಲೆಕಡೆಯಾದ ಮೂವತ್ತು ತತ್ವರೂಪವಾಗಿರ್ಪ, ಆತ್ಮಾತ್ಮರುಗಳಿಗೆ ಬೇರೆ ಬೇರಾಗಿರ್ಪ ಸೂಕ್ಷ್ಮದೇಹವೆಂದು ಹೇಳಲ್ಪಡುವುದು. ಆ ಪುರ್ಯಷ್ಟಕದೇಹಯುತರ ಮಧ್ಯದಲ್ಲಿ ಕೆಲವಿಶಿಷ್ಟಾಧಿಕಾರಿಗಳನ್ನು ಹೇಳುತ್ತಿಹನು:—ಮಹೇಶ್ವರಃ—ಮಂತ್ರಮಹೇಶ್ವರನಾಗಿರ್ಪ ಅನಂತೇಶ್ವರನು, ತೇಷಾಂ—ಆ ಪುರ್ಯಷ್ಟಕದೇಹಯುತರುಗಳ, ಮಧ್ಯದಲ್ಲಿ, ಕಾಂಶ್ಚಿತ್—ಕೆಲಬರುಗಳನ್ನು, ಅನುಗೃಹ್ಯ—ಅನುಗ್ರಹಿಸಿ, ಭುವನಪತಿತ್ವಂ—ಭುವನಾಧಿಪತಿತ್ವವನ್ನು, ವಿತರತಿ—ಕೊಡುತ್ತಿಹನು. (ಭುವನಪತಿಗಳಾರೆಂದರೆ—ಲೋಕಪಾಲಾಷ್ಟಕರು, ಗುಹ್ಯಾಷ್ಟಕರು, ಅದಿಗುಹ್ಯಾಷ್ಟಕರು, ಗುಹ್ಯಾದ್ಗುಹ್ಯಾಷ್ಟಕರು, ಪವಿತ್ರಾಷ್ಟಕರು—ಎಂಬ ಈ ಪಂಚಾಷ್ಟಕರುಗಳು). ॥೧೩॥

ಮಲಕರ್ಮಯುಕ್ತವಾದ ಪ್ರಳಯಕೇವಲರೆಂಬ ಆತ್ಮರವರ್ಗದಲ್ಲಿ ಪರಶಿವನಿಂದ ಅನುಗೃಹೀತರಾದ ಮಾಯಾಗರ್ಭಾಧಿಕಾರಿಗಳನ್ನು ಹೇಳುತ್ತಿಹನು:—

ಶ್ಲೋ॥ ಶೇಷಾಭವಂತಿಸಕಲಾಃಕಲಾದಿಯೋಗಾದಹರ್ಮುಖೇಕಾಲೇ ।
ಶತಮಷ್ಟಾದಶತೇಷಾಂಕುರುತೇಸ್ವಯಮೇವಮಂತ್ರೇಶಾನ್ ॥೧೪

ಟೀ॥ ಶೇಷಾಃ—ಪಕ್ವಮಲರಹತನದಿಂದ ಮುಕ್ತರಾದವರುಗಳ ದೆಸೆಯಿಂದಲೂ ಅಪಕ್ವಮಲರಹತನದಿಂದ ಸಂಸಾರಿಗಳಾದವರ ದೆಸೆಯಿಂದಲೂ ಕೂಡ ಆರು ಕೆಲಬರು ಒಪ್ಪಚ್ಛಿಪರಿಪಕ್ವವಾದ ಮಲವುಳ್ಳವರಾಗಿದ್ದಾರೋ ಅವರುಗಳು, ಅಹರ್ಮುಖೇಕಾಲೇ—ಸೃಷ್ಟಿಕಾಲದಲ್ಲಿ, ಕಲಾದಿಯೋಗಾತ್—ಮಿಶ್ರಾಧ್ವದ ಅಧಿಕಾರಕ್ಕೆ ಯೋಗ್ಯವಾದ ಮಾಯಾದೇಹದ ಸಂಬಂಧದದೆಸೆಯಿಂದ, ಸಕಲಾಃ—ಸಕಲ

ರುಗಳು, ಭವಂತಿ—ಆಗುತ್ತಿಹರು, (ಆವರುಗಳಾದರೂ ಸಕಲರುಗಳೋಪಾದಿಯು ಲ್ಲಿ ದೇಹವಶರುಗಳಲ್ಲ). ತೇಷಾಂ—ಆವರುಗಳೊಳಗೆ, ಶತಂ ಅಷ್ಟಾದಶ –ನೂರ ಹದಿನೆಂಟನ್ನು, ಸ್ವಯಮೇವ—ಪರಶಿವನು ತಾನೇ, ಮಂತ್ರೇಶಾ—ಮಂತ್ರೇಶ್ವರ ರುಗಳನ್ನು, ಕುರುತೆ—ಮಾಡುತ್ತಿಹನು. ॥೧೩॥

ಆವರುಗಳನ್ನೇ ವಿವರಿಸಿ ಹೇಳುತ್ತಿಹನು:—

ಶ್ಲೋ॥ ತತ್ರಾಷ್ಟೌಮಂಡಲಿನಃ ಕ್ರೋಧಾದ್ಯಾಸ್ತತ್ಸಮಾಶ್ಚ ವೀರೇಶಃ ।
ಶ್ರೀಕಂಠಶ್ಶತರುದ್ರಾಶ್ಶತಮಿತ್ಯಷ್ಟಾದಶಾಭ್ಯಧಿಕಂ ॥೧೪॥

ಟೀ॥ ತತ್ರ—ಆ ನೂರಹದಿನೆಂಟರಲ್ಲಿ, ಮಂಡಲಿನಃ–ಕಲಾಮಸ್ತಕದಲ್ಲಿರ್ಪ ಮಂಡಲೇಶ್ವರರುಗಳು, ಅಷ್ಟೌ—ಎಂಟು, ಕ್ರೋಧಾದ್ಯಾಶ್ಚ—ಗುಣಮಸ್ತಕದಲ್ಲಿ ಹಂಥ ಕ್ರೋಧೇಶಾದಿಗಳು ಕೂಡ, ತತ್ಸಮಾಃ—ಆವರೋಪಾದಿಯಲ್ಲಿ ಎಂಟು; ವೀರೇಶಃ—ಶತರುದ್ರರುಗಳಿಗೆ ಕರ್ತೃವಾದ ವೀರೇಶ್ವರನು, ಶ್ರೀಕಂಠಃ—ಗುಣತ ತ್ವದಲ್ಲಿದ್ದು ಕೆಳಗಣ ಭುವನಂಗಳಿಗೆ ಕರ್ತೃವಾದ ಶ್ರೀಕಂಠೇಶ್ವರನು, ಶತರುದ್ರಾಃ —ಬ್ರಹ್ಮಾಂಡಕ್ಕೆ ರಕ್ಷಕರುಗಳಾದ ಶತರುದ್ರರುಗಳು, ಇತಿ—ಈಪ್ರಕಾರದಲ್ಲಿ, ಅಷ್ಟಾ ದಶಾಭ್ಯದಿಕಂ—ಹದಿನೆಂಟು ಅಧಿಕವಾದ, ಶತಂ—ನೂರು. ॥೧೪॥

ಸಕಲರುಗಳೊಳಗೆ ಪರಿಪಕ್ವವಾದ ಮಲವನುಳ್ಳವರುಗಳನ್ನು ಹೇಳುತ್ತಿ ಹನು :—

ಶ್ಲೋ॥ ಪರಿಪಕ್ವಮಲಾನೇತಾನುತ್ಸಾದನಹೇತುಶಕ್ತಿಪಾತೇನ ।
ಯೋಜಯತಿ ಪರೇತತ್ವೇಸದೀಕ್ಷಯಾಚಾರ್ಯಮೂರ್ತಿಸ್ಥಃ॥೧೫॥

ಟೀ॥ ಸಃ—ಆ ಶಿವನು, ಪರಿಪಕ್ವಮಲಾನ್—ಮಿಗಿಲಾಗಿ ಪಕ್ವವಾದ ಮಲ ವನುಳ್ಳ, ಏತಾನ್—ಈ ಸಕಲರುಗಳನ್ನು, ಉತ್ಸಾದನಹೇತುಶಕ್ತಿಪಾತೇನ—ಪಾಶಂ ಗಳನ್ನು ತೊಲಗಿಸುವುದಕ್ಕೆ ಕಾರಣವಾದ ಅನುಗ್ರಹಶಕ್ತಿಯುಸಂಪರ್ಕದಿಂದ, ಆಚಾ ರ್ಯಮೂರ್ತಿಸ್ಥಃ—ಗುರುಮೂರ್ತಿಯನಧಿಷ್ಠಿಸಿಕೊಂಡಿರ್ಪಾತನಾಗಿ, ದೀಕ್ಷಯಾ— ದೀಕ್ಷೆಯಿಂದ, ಪರೇತತ್ವೇ—ಉತ್ಕೃಷ್ಟವಾದ ತನಗೆ ಸರಿಯಾದಪದದಲ್ಲಿ, ಯೋ ಜಯತಿ—ಕೂಡಿಸುತ್ತಿಹನು. ॥೧೫॥

ಅಪಕ್ವವಾದ ಮಲಕರ್ಮಗಳುಳ್ಳಂಥ ಆತ್ಮರುಗಳು ಪುರ್ಯಷ್ಟಕದೇಹಯುಕ್ತ ರಾಗಿ, ಸಮಸ್ತಯೋನಿಗಳಲ್ಲಿ ಬಹರೆಂದು ಮೊದಲು ಹೇಳಿದನು. ಅದೇನುಕಾರಣ ಬಹರೆಂದರೆ–ಆವರ ಕರ್ಮಫಲಂಗಳನ್ನು ಉಣಿಸುವುದಕ್ಕೋಸುಗವಾಗಿ ಶಿವನು ಭುವ ನಜ ದೇಹಂಗಳಲ್ಲಿ ಆವರನ್ನು ಕೂಡುವನೆಂದು ಹೇಳುತ್ತಿಹನು.

ಶ್ಲೋ॥ ಬದ್ಧಾಂಶ್ಚೈಷಾನಪರಾನ್ವಿನಿಯುಙ್ಕ್ತೇ ಭೋಗಭುಕ್ತಯೇಪುಂಸಃ।
ತತ್ಕರ್ಮಣಾಮನುಗಮಾದಿತ್ಯೇವಂಕೀರ್ತಿತಾಃ ಪಶವಃ ॥ ೧೬ ॥

ಟೀ॥ ಬದ್ಧಾರ್ಃ—ಬದ್ಧರಾಗಿರ್ಪರ್, ಶೇಷಾರ್—ಉಳಿದವರಾದ, ಅಪರಾರ್ ಪುಂಸಃ—ಮತ್ತೆ ಕೆಲಪುರುಷರುಗಳನ್ನು, ಭೋಗಭುಕ್ತಯೆ—ಭೋಗವನುಣಲೋಸುಗ, ತತ್ಕರ್ಮಣಾಂ—ಅವರುಗಳ ಕರ್ಮಂಗಳ, ಅನುಗಮಾತ್—ಅನುಸಾರದ ಬೆಸೆಯಿಂದ, ವಿನಿಯುಙ್ತೆ—ಕೂಡುತ್ತಿಹನು. ಇತ್ಯೇವಂ—ಈಪ್ರಕಾರದಲ್ಲಿ, ಪಶವಃ—ಪಶುಗಳು, ಕೀರ್ತಿತಾಃ—ಹೇಳಲ್ಪಟ್ಟರು. ॥೧೬॥

ಅನಂತರದಲ್ಲಿ ಪಾಶಪದಾರ್ಥಭೇದವನ್ನು ಹೇಳುತ್ತಿಹನು.

ಶ್ಲೋ॥ ಪಾಶಾಶ್ಚತುರ್ವಿಧಾಸ್ಸ್ಯುಃಪುಂಸೋಮಲಕರ್ಮಜಾವಮತೌಪ್ರಥಮೌ
ಮಾಯೇಯತಿರೋಧಾಯಿಕಶಿವಶಕ್ತಿಸಮುದ್ಭವೌಚಾನ್ಯೌ॥೧೭॥

ಟೀ॥ ಪುಂಸಃ—ಪುರುಷಂಗೆ, ಪಾಶಾಃ—ಪಾಶಂಗಳು, ಚತುರ್ವಿಧಾಃ—ನಾಲ್ಕುಪ್ರಕಾರವಾಗಿರ್ಪಂಥವು, ಸ್ಯುಃ—ಅಹವು. ಅವಾವುವೆಂದೊಡೆ, ಮಲಕರ್ಮಜೌ—ಮಲಕರ್ಮಗಳಿಂದ ಹುಟ್ಟಿದುವುಗಳು, ಪ್ರಥಮೌ—ಅನಾದಿಸಿದ್ಧಗಳೆಂದು, ಮತೌ—ಸಂಮತಂಗಳು. ಮಾಯೇಯ ತಿರೋಧಾಯಿಕ ಶಿವಶಕ್ತಿ ಸಮುದ್ಭವೌಚ—ಮಾಯೆಯಿಂದ ಹುಟ್ಟಿದಂಥ ಕಲಾದಿಗಳು, ತಿರೋಧಾಯಿಕವಾದ ಶಿವನ ಶಕ್ತಿಯೂ, ಅನ್ಯೌ—ಬೇರಾಗಿರ್ಪಂತಹವು. ॥೧೭॥

ಮೊದಲು ಪಾಶಂಗಳೈದೆಂದು ಹೇಳಿ, ಈಗ ನಾಲ್ಕು ಪಾಶಂಗಳನ್ನು ಹೇಳುವುದಕ್ಕೆ ಕಾರಣವೇನೆಂದೊಡೆ—ವಿಜ್ಞಾನಾಕಲರವಿಷಯವಾದ ಬಿಂದುವೆಂಬ ಪಾಶವನ್ನು ಮುಂದೆ ಹೇಳಿಹನಾಗಿ, ಇಲ್ಲಿ ಸಕಲರುಗಳ ವಿಷಯವಾದ ನಾಲ್ಕು ಪಾಶಂಗಳನ್ನು ಹೇಳಿಹನೆಂಬುದರ್ಥ. ಆ ನಾಲ್ಕು ಪಾಶಂಗಳೊಳಗೆ ಮಲದ ಲಕ್ಷಣವನ್ನು ಹೇಳುತ್ತಿಹನು.

ಶ್ಲೋ॥ ಏಕೋಹ್ಯನೇಕಶಕ್ತಿರ್ದೃಕ್ಕ್ರಿಯಯೋಶ್ಛಾದಕೋಮಲಃಪುಂಸಃ
ತುಷಕಂಬುಕವಜ್ಞೇಯಸ್ತಾಮ್ರಾಶ್ರಿತಕಾಳಿಕಾವದ್ವಾ ॥೧೮॥

ಟೀ॥ ಮಲಃ—ಮಲವು, ಏಕಃ—ಒಂದೆಂದು, ಹಿ—ಪ್ರಸಿದ್ಧವು. ಅನೇಕಶಕ್ತಿಃ—ಅನೇಕಾತ್ಮರುಗಳನಾವರಿಸುವ ಅನಂತಶಕ್ತಿಗಳನುಳ್ಳಂತಹದು, ಪುಂಸಃ—ಪುರುಷನ, ದೃಕ್ಕ್ರಿಯಯೋಃ—ಜ್ಞಾನಕ್ರಿಯೆಗಳಿಗೆ, ಛಾದಕಃ—ರೋಧಕವಾಗಿದ್ದಂತಹದು, ತುಷಕಂಬುಕವತ್- ಹೊಟ್ಟುತವುಡು ಹೇಗೆ ಅಂಕುರೋತ್ಪತ್ತಿಗೆ ಕಾರಣವೋಹಾಗೆ ದೇಹೋತ್ಪತ್ತಿಗೆ ಕಾರಣವಾಗಿರ್ಪುದೆಂದು, ಜ್ಞೇಯಃ—ಅರಿಯಲ್ಪತಕ್ಕುದು, ತಾಮ್ರಾಶ್ರಿತಕಾಳಿಕಾವದ್ವಾ-ತಾಮ್ರದ ಕಾಳಿಕೆಯು (ಕಿಲುಬು) ಹೇಗೆ ರಸಸಿದ್ಧಿಯಿಂದ ತೊಲಗಿಸಲ್ಪಡುತ್ತಿಹುದೋ ಹಾಗೆ ಶಿವಶಕ್ತಿಯಿಂದ ತೊಲಗಿಸಲ್ಪಡುತ್ತಿಹುದೆಂದು, ಜ್ಞೇಯಃ—ಅರಿಯಲ್ಪತಕ್ಕುದು. (ಹೀಗಲ್ಲದೆ ಮಲವು ಆತ್ಮನಲ್ಲಿ ಹೊಟ್ಟಿನೋಪಾದಿಯಲ್ಲಿ ತಾಮ್ರದ ಕಾಳಿಕೆಯೋಪಾದಿಯಲ್ಲಿ ಬೆರಸಿಹುದೆಂದು ತಿಳಿಯಲಾಗದು). ॥೧೮॥

ಕರ್ಮಕ್ಕೂ, ಮಾಯೆಗೂ ಲಕ್ಷಣವನ್ನು ಹೇಳುತ್ತಿಹನು:

ಶ್ಲೋ॥ ಕರ್ಮಾನಾದಿಪ್ರೋಕ್ತಂ ಧರ್ಮಾಧರ್ಮಾತ್ಮಕಂವಿಚಿತ್ರಂ ಚ ।
ಮಾಯಾಚವಸ್ತುರೂಪಾ ಮೂಲಂ ವಿಶ್ವಸ್ಯನಿತ್ಯಾಸಾ ॥ ೧೯ ॥

ಟೀ॥ ಕರ್ಮ—ಕರ್ಮವು, ಅನಾದಿ—ಬೀಜವೃಕ್ಷದೋಪಾದಿಯಲ್ಲಿ ಪ್ರವಾಹಾನಾದಿಯೆಂದು, ಪ್ರೋಕ್ತಂ—ಹೇಳಲ್ಪಟ್ಟಿತು. ಧರ್ಮಾಧರ್ಮಾತ್ಮಕಂ—ಪುಣ್ಯಪಾಪರೂಪವಾಗಿರ್ಪಂತಹದು, ವಿಚಿತ್ರಂಚ—ನಾನಾಪ್ರಕಾರವಾಗಿರ್ಪಂತಹದು. ಮಾಯಾಚ—ಮಾಯೆಯೂ, ವಸ್ತುರೂಪಾ—ಸತ್ಯರೂಪವಾಗಿರ್ಪಂತಹದು; (ವೇದಾಂತಿಗಳು ಹೇಳುವಹಾಗೆ ಮಿಥ್ಯಾರೂಪವಾಗಿರ್ಪುದಲ್ಲ) ವಿಶ್ವಸ್ಯ—ಸಮಸ್ತಕಲಾದಿಗಳಿಗೆ, ಮೂಲಂ—ಉಪಾದಾನಕಾರಣವಾಗಿರ್ಪುದು. ಸಾ—ಆ ಮಾಯೆಯು, ನಿತ್ಯಾ—ಶಾಶ್ವತವಾಗಿರ್ಪುದು ॥ ೧೯ ॥

ಈ ಪ್ರಕಾರದಿಂದೆ ಮುಖ್ಯವಾದ ಪಾಶತ್ರಯಂಗಳನ್ನು ಹೇಳಿ, ಶಕ್ತಿಗೆ ಉಪಚಾರದಿಂದ ಪಾಶತ್ವವೆಂದು ಹೇಳುತ್ತಿಹನು:

ಶ್ಲೋ॥ ಪಾಶಾನುಗ್ರಾಹಿತ್ವಾತ್ಪುರುಷತಿರೋಧಾಯಿಕಾವಿಭೋಃಶ್ಶಕ್ತಿಃ ।
ಪಾಶತ್ವೇನಾಭಿಹಿತಾ ಕಥಿತಾಃ ಪಾಶಾಶ್ಚತುರ್ವಿಧಾಸ್ತ್ವೇವಂ ॥ ೨೦ ॥

ಟೀ॥ ಪುರುಷತಿರೋಧಾಯಿಕಾ—ಪುರುಷಂಗೆ ಭೋಗವನ್ನು ಕೊಡುವಂಥ, ವಿಭೋಃ—ಪರಮೇಶ್ವರನ, ಶಕ್ತಿಃ—ಶಕ್ತಿಯು, ಪಾಶಾನುಗ್ರಾಹಿತ್ವಾತ್—ಪಾಶಂಗಳನ್ನು ಅನುಗ್ರಹಿಸುವುದಹತನದ ದೆಸೆಯಿಂದ, ಪಾಶತ್ವೇನ—ಪಾಶವಹತನದಿಂದ, ಅಭಿಹಿತಾ—ಹೇಳಲ್ಪಟ್ಟಿತು. ಚತುರ್ವಿಧಾಃ—ನಾಲ್ಕು ಪ್ರಕಾರಗಳಾದ, ಪಾಶಾಸ್ತು—ಪಾಶಂಗಳಾದರೊ, ಏವಂ – ಈ ಪ್ರಕಾರದಲ್ಲಿ, ಕಥಿತಾಃ—ಹೇಳಲ್ಪಟ್ಟವು.

ಈ ಪ್ರಕಾರದಲ್ಲಿ ಸಕಲರುಗಳ ವಿಷಯವಾದ ಕಾರಣತ್ರಯವನ್ನು ಹೇಳಿ, ಮಾಯೆಯನ್ನೂ ಮೀರಿದ ವಿಜ್ಞಾನಾಕಲರ ವಿಷಯವಾದ ಶುದ್ಧಾಧ್ವರೂಪವಾದ ಬಿಂದುವೆಂಬ ಪಾಶವನ್ನು ಹೇಳುತ್ತಿಹನು.

ಶ್ಲೋ॥ ಶುದ್ಧಾನಿಪಂಚತತ್ವಾನ್ಯಾದ್ಯಂತೇಷುಸ್ಮರಂತಿ ಶಿವತತ್ವಂ ।
ಶಕ್ತಿಸದಾಶಿವತತ್ವೇ ಈಶ್ವರವಿದ್ಯಾಖ್ಯ ತತ್ವೇಚ ॥ ೨೧ ॥

ಟೀ॥ ಶುದ್ಧಾನಿ—ಶುದ್ಧಗಳಾಗಿರ್ಪ, ತತ್ವಾನಿ—ತತ್ವಂಗಳು, ಪಂಚ—ಐದು. ತೇಷು—ಅವರೊಳಗೆ, ಶಿವತತ್ವಂ—ಶಿವತತ್ವವೆನಿಸಿಕೊಂಬ ಬಿಂದುವನ್ನು, ಆದ್ಯಂ—ಉಪಾದಾನವಾಗಿರ್ಪುದೆಂದು, ಸ್ಮರಂತಿ—ಹೇಳುತ್ತಿಹರು. ಆದರ ಕಾರ್ಯವಾದ ತತ್ವಂಗಳಾವಾವುವೆಂದೊಡೆ; ಶಕ್ತಿಸದಾಶಿವತತ್ವೆ—ಶಕ್ತಿತತ್ವ ಸದಾಶಿವತತ್ವಂಗಳು, ಈಶ್ವರವಿದ್ಯಾಖ್ಯತತ್ವೇಚ—ಈಶ್ವರತತ್ವ ವಿದ್ಯಾತತ್ವಂಗಳು ॥ ೨೧ ॥

ಈ ಪ್ರಕಾರದಿಂದ ಶುದ್ಧತತ್ವಗಳನ್ನು ಲೆಕ್ಕದಿಂದಲೂ, ಹೆಸರಿಂದಲೂ, ಹೇಳಿ, ಆ ಪ್ರಕಾರದಲ್ಲಿ ಅಶುದ್ಧ ತತ್ವಂಗಳನ್ನು ಹೇಳುತ್ತಿಹನು.

ಶ್ಲೋ॥ ಪುಂಸೋಜ್ಞಕರ್ತೃತಾರ್ಥಂ ಮಾಯಾತಸ್ತತ್ವಪಂಚಕಂಭವತಿ ।
ಕಾಲೋ ನಿಯತಿಶ್ಚ ತಥಾ ಕಲಾಚ ವಿದ್ಯಾಚ ರಾಗಶ್ಚ ॥ ೨೧ ॥

ಟೀ॥ ಪುಂಸಃ—ಜದಾತ್ಮನ, ಜ್ಞಕರ್ತೃತಾರ್ಥಂ—ಜ್ಞಾತೃತ್ವಕರ್ತೃತ್ವಸಿದ್ಧಿಗೋಸ್ಕರ, ಮಾಯಾತಃ—ಮಾಯೆಯ ದೆಸೆಯಿಂದ, ತತ್ವಪಂಚಕಂ—ತತ್ವಪಂಚಕವು, ಭವತಿ—ಆಗುತ್ತಿಹುದು. ಅವಾವುವೆಂದೊಡೆ:—ಕಾಲಃ—ಕಾಲವು, ನಿಯತಿಶ್ಚ—ನಿಯತಿಯೂ, ತಥಾ - ಹಾಗೆ, ಕಲಾಚ—ಕಲೆಯೂ, ವಿದ್ಯಾಚ – ವಿದ್ಯೆಯೂ, ರಾಗಶ್ಚ—ರಾಗವೂಕೂಡ ॥ ೨೧ ॥

ಶ್ಲೋ॥ ಅವ್ಯಕ್ತಂ ಮಾಯಾತೊ ಗುಣತತ್ವಂ ತದನುಬುದ್ಧ್ಯಹಂಕಾರೌ ।
ಚೇತೋಧೀಕರ್ಮೇಂದ್ರಿಯತನ್ಮಾತ್ರಾಣ್ಯನು ಚ ಭೂತಾನಿ ॥ ೨೨ ॥

ಟೀ॥ ಮಾಯಾತಃ—ಮಾಯೆಯ ದೆಸೆಯಿಂದ, ಅವ್ಯಕ್ತಂ—ಪ್ರಕೃತಿತತ್ವವು, ಭವತಿ—ಆಗುತ್ತಿಹುದು. ಗುಣತತ್ವಂ—ಗುಣತತ್ವವೂ ಆಗುತ್ತಿಹುದು. ತದನು—ಬಳಿಕ, ಆ ಗುಣತತ್ವದಿಂದ, ಬುದ್ಧ್ಯಹಂಕಾರೌ—ಬುದ್ಧಿತತ್ವ ಅಹಂಕಾರತತ್ವಂಗಳೂ, ಚೇತಃ—ಮನಸ್ತತ್ವವೂ, ಧೀಕರ್ಮೇಂದ್ರಿಯ ತನ್ಮಾತ್ರಾಣಿ—ಜ್ಞಾನೇಂದ್ರಿಯ ಕರ್ಮೇಂದ್ರಿಯಂಗಳೂ ತನ್ಮಾತ್ರಂಗಳೂ, ಅನುಚ— ಅನಂತರದಲ್ಲಿ, ಭೂತಾನಿ—ಭೂತಂಗಳೂ, ಭವಂತಿ—ಆಗುತ್ತಿಹವು ॥ ೨೨ ॥

ಶ್ಲೋ॥ಪುರುಷಸ್ಯಭೋಗಹೇತೋಃಪ್ರಧಾನತೋವಿಂಶತಿರ್ಭವೇತ್ತ್ರ್ಯಧಿಕಾ
ಯಸ್ಮಾತ್ಪ್ರಕೃತಿಗುಣಾನಾಂ ನಾತ್ಯಂತಂವಸ್ತುತೋಭೇದಃ ॥ ೨೪ ॥

ಪ್ರಧಾನತಃ—ಪ್ರಕೃತಿಯ ದೆಸೆಯಿಂದ, ಪುರುಷಸ್ಯ—ಪುರುಷನ, ಭೋಗಹೇತೋಃ - ಭೋಗಾರ್ಥವಾಗಿ, ತ್ರ್ಯಧಿಕಾ—ಮೂರು ಅಧಿಕವಾದ, ವಿಂಶತಿಃ—ಇಪ್ಪತ್ತು ತತ್ವವು, ಭವೇತ್—ಅಹುದು. ಯಸ್ಮಾತ್—ಆವುದಾನೊಂದು ಕಾರಣದಿಂದ, ಪ್ರಕೃತಿಗುಣಾನಾಂ—ಪ್ರಧಾನಕ್ಕೂ ಗುಣಂಗಳಿಗೂ, ವಸ್ತುತಃ—ಪರಮಾರ್ಥದಿಂದ, ಅತ್ಯಂತಂ—ಮಿಗಿಲಾಗಿ, ಭೇದಃ—ಭೇದವು, ನ—ಇಲ್ಲ ॥೨೪॥

ಈ ಪ್ರಕಾರದಲ್ಲಿ ಶುದ್ಧತತ್ವಂಗಳನ್ನೂ ಅಶುದ್ಧತತ್ವಂಗಳನ್ನೂ ಉದ್ದೇಶಿಸಿ, ಅವರೊಳಗೆ ಮೊದಲು ಉದ್ದೇಶಿಸಿದ ಶಿವತತ್ವಕ್ಕೆ ಲಕ್ಷಣವನ್ನು ಹೇಳುತ್ತಿಹನು.

ಶ್ಲೋ॥ ವ್ಯಾಪಕಮೇಕಂನಿತ್ಯಂ ಕಾರಣಮಖಿಲಸ್ಯತತ್ವಜಾತಸ್ಯ ।
ಜ್ಞಾನಕ್ರಿಯಾಸ್ವಭಾವಂ ಶಿವತತ್ವಂ ಜಗದುರಾಚಾರ್ಯಾಃ ॥೨೫॥

ಟೀ॥ ಶಿವತತ್ವಂ—ಶುದ್ಧಾಧ್ವಕ್ಕೆ ಉಪಾದಾನವಾಗಿರ್ಪ ಬಿಂದುವನ್ನು, ವ್ಯಾಪಕಂ – ತನ್ನ ಕಾರ್ಯಂಗಳಾದ ನಿವೃತ್ತ್ಯಾದಿ ಕಲೆಗಳಿಂದ ಶುದ್ಧಾಶುದ್ಧ ತತ್ವಂಗಳನ್ನು ವ್ಯಾಪಿಸಿಕೊಂಡಿರ್ಪಂತಹದೆಂದು, ಏಕಂ—ಒಂದೆಯಾಗಿರ್ಪುದೆಂದು, ನಿತ್ಯಂ—ಕೇಡಿಲ್ಲದಿರ್ಪುದೆಂದು, ಅಖಿಲಸ್ಯ – ಸಮಸ್ತವಾದ, ತತ್ವಜಾತಸ್ಯ—ಶುದ್ಧತತ್ವಸಮೂಹಕ್ಕೆ, ಕಾರಣಂ—ಉಪಾದಾನಕಾರಣವಾಗಿರ್ಪುದೆಂದು, ಆಚಾರ್ಯಾಃ—ಆಚಾರ್ಯರುಗಳು, ಜಗದುಃ—ಹೇಳಿದರು ॥ ೨೫॥

ಈ ಶಿವತತ್ವವು ತತ್ವಂಗಳಿಗೆ ಕಾರಣವೆಂಬುದು ಉಪಲಕ್ಷಣವಾದುದರಿಂದ ವರ್ಣ ಪದ ಮಂತ್ರ ಕಲಾ ತತ್ವ ಭುವನವೆಂಬ ಷಡಧ್ವಕ್ಕೆ ಉಪಾದಾನ ಕಾರಣವೆಂಬುದರ್ಥ.

ಶ್ಲೋ॥ ಅಸ್ಮಿನ್ನಿಲೀಯನಿಖಿಲಾ ಇಚ್ಛಾದ್ಯಾಶ್ಶಕ್ತಯಸ್ಸ್ವಕಂಕೃತ್ಯಂ ।
ಕುರ್ವಂತಿತೇನತದಿದಂ ಸರ್ವಾನುಗ್ರಾಹಕಂ ಪ್ರಾಹುಃ ॥ ೨೬ ॥

ಟೀ॥ ನಿಖಿಲಾಃ—ಸಮಸ್ತವಾದ, ಇಚ್ಛಾದ್ಯಾಃ—ಇಚ್ಛಾ ಜ್ಞಾನಕ್ರಿಯೆಗಳೆಂಬಂಥ, ಶಕ್ತಯಃ—ಪರಶಿವನ ಶಕ್ತಿಗಳು, ಅಸ್ಮಿನ್— ಈ ಉಪಾದಾನರೂಪವಾದ ಶಿವತತ್ವದಲ್ಲಿ, ನಿಲೀಯ—ಅದಕ್ಕೆ ಪ್ರೇರಕವಾಗಿದ್ದು, ಸ್ವಕಂ—ತಮ್ಮ ಸಂಬಂಧವಾಗಿರ್ಪ, ಕೃತ್ಯಂ—ಸೃಷ್ಟಿ ಮೊದಲಾಗಿ ಅನುಗ್ರಹಕಡೆಯಾಗಿರ್ಪ ಪಂಚಕೃತ್ಯವನ್ನು, ಕುರ್ವಂತಿ—ಮಾಡುತ್ತಿಹವು. ತೇನ—ಆದುಕಾರಣದಿಂದ, ತದಿದಂ—ಆ ಈ ಶಿವತತ್ವವನ್ನು, ಸರ್ವಾನುಗ್ರಾಹಕಂ—ಸಮಸ್ತಕ್ಕೆ ಅನುಗ್ರಾಹಕವಾಗಿರ್ಪುದೆಂದು ಪ್ರಾಹುಃ—ಹೇಳುತ್ತಿಹರು ॥ ೨೬॥

ಈ ಪ್ರಕಾರದಲ್ಲಿ ಶಿವತತ್ವವನ್ನು ಹೇಳಿ, ಅದರ ಕಾರ್ಯಂಗಳಾದ ಶಕ್ತ್ಯಾದಿತತ್ವಂಗಳನ್ನು ಹೇಳುತ್ತಿಹನು.

ಶ್ಲೋ॥ ಚಿದಚಿದನುಗ್ರಹಹೇತೋರಸ್ಯ ಸಿಸೃಕ್ಷೋರ್ಯ ಆದ್ಯಉನ್ಮೇಷಃ ।
ತಚ್ಛಕ್ತಿತತ್ವಮಭಿಹಿತ ಮವಿಭಾಗಾಪನ್ನ ಮಸ್ಯೈವ ॥ ೨೭॥

ಟೀ॥ ಸಿಸೃಕ್ಷೋಃ—ಹುಟ್ಟಿಸುವ ಇಚ್ಛೆಯುಳ್ಳಂಥ ಪರಮೇಶ್ವರನ, ಚಿದಚಿದನುಗ್ರಹಹೇತೋಃ—ಚಿತ್ತು ಅಚಿತ್ತುಗಳ ಅನುಗ್ರಹಕ್ಕೆ ಸಾಧನವಾಗಿರ್ಪ, ಅಸ್ಯ—ಈ ಶಿವತತ್ವದ, ಯಃ—ಆವುದಾನೊಂದು, ಆದ್ಯಃ—ಮೊದಲಾಗಿರ್ಪ, ಉನ್ಮೇಷಃ—ಶಾಂತ್ಯಾದಿ ಭುವನರೂಪವಾದ ಪರಿಣಾಮವುಂಟೋ, ತತ್—ಅದು, ಶಕ್ತಿತತ್ವಂ—ಶಕ್ತಿತತ್ವವೆಂದು, ಅಭಿಹಿತಂ—ಹೇಳಲ್ಪಟ್ಟಿತು. ಅವಿಭಾಗಾಪನ್ನಂ—ನಿರವಯುವವಾದ ರೂಪವು, ಅಸ್ಯೈವ—ಈ ಪರಮಕಾರಣವಾದ ಬಿಂದುವಿಗೇ॥೨೭॥

ಆ ಬಿಂದು, ಮೂಲಕಾರಣವಹುದರಿಂದ ನಿರವಯುವಾಗಿರ್ಪಂತಹದು. ಅದರ ಕಾರ್ಯಂಗಳಾದ ಶಕ್ತ್ಯಾದಿ ತತ್ವಂಗಳು ಭುವನಂಗಳಿಗೆ ಆಧಾರಂಗಳಾದುದರಿಂದ ಸಾಕಾರಂಗಳೆಂಬುದರ್ಥ.

ಶ್ಲೋ॥ ಜ್ಞಾನಕ್ರಿಯಾಖ್ಯಶಕ್ತ್ಯೋಃ ರಪಕರ್ಷೋತ್ಕರ್ಷಯೋಃ ರಭಾ [ವೇನ |
ಯಃಪ್ರಸರಸ್ತಂ ಪ್ರಾಹುಃ ಸ್ಸದಾಶಿವಾಖ್ಯಂ ಬುಧಾಸ್ತತ್ವಂ ‖ ೧೮ ‖

ಟೀ॥ ಜ್ಞಾನಕ್ರಿಯಾಖ್ಯಶಕ್ತ್ಯೋಃ—ಸೃಜಿಸುವ ಇಚ್ಛೆಯುಳ್ಳಂಥ ಪರಮೇಶ್ವರನ ಜ್ಞಾನಕ್ರಿಯಾಶಕ್ತಿಗಳ, ಅಪಕರ್ಷೋತ್ಕರ್ಷಯೋಃ—ಕುಂದುಹೆಚ್ಚುಗಳ, ಅಭಾವೇನ = ಇಲ್ಲದೆ ಇಹುದರಿಂದ, ಯಃ—ಆವುದಾನೊಂದು, ಪ್ರಸರಃ—ಬಿಂದುವಿನ ಎರಡನೆಯ ಪರಿಣಾಮವುಂಟೋ, ತಂ—ಅದನ್ನು, ಸದಾಶಿವಾಖ್ಯಂ—ಸದಾಶಿವನೆಂಬ ಹೆಸರನ್ನುಳ್ಳಂಥ, ತತ್ವಂ—ತತ್ವವೆಂದು, ಬುಧಾಃ—ಜ್ಞಾನಿಗಳು, ಪ್ರಾಹುಃ—ಹೇಳುತ್ತಿಹರು. ॥೨೮॥

ಶ್ಲೋ॥ ನ್ಯಗ್ಭವತಿಯತ್ರಶಕ್ತಿರ್ಜ್ಞಾನಾಖ್ಯೋದ್ರಿಕ್ತತಾಂಕ್ರಿಯಾಭಜತೆ|
ಈಶ್ವರತತ್ವಂ ತದಿಹ ಪ್ರೋಕ್ತಂ ಸರ್ವಾರ್ಥಕರ್ತೃಸದಾ ‖ ೧೯ ‖

ಟೀ॥ ಯತ್ರ—ಆವುದಾನೊಂದು ಬಿಂದುವಿನ ಮೂರನೆಯ ಪರಿಣಾಮದಲ್ಲಿ, ಜ್ಞಾನಾಖ್ಯಾ—ಜ್ಞಾನವೆಂಬ ಹೆಸರುಳ್ಳಂಥ, ಶಕ್ತಿಃ—ಶಿವನಶಕ್ತಿಯು, ನ್ಯಗ್ಭವತಿ-ಅಲ್ಪವಾಗುತ್ತಿಹುದು. ಕ್ರಿಯಾ—ಕ್ರಿಯಾಶಕ್ತಿಯು, ಉದ್ರಿಕ್ತತಾಂ—ಮಿಗಿಲಹತನವನ್ನು, ಭಜತೆ—ಎಯ್ದುತ್ತಿಹುದು. ತತ್—ಅದು, ಇಹ—ಇಲ್ಲಿ, ಈಶ್ವರತತ್ವಂ—ಈಶ್ವರತತ್ವವೆಂದು, ಪ್ರೋಕ್ತಂ—ಹೇಳಲ್ಪಟ್ಟಿತು. ಸದಾ—ಆವಾಗಳೂ, ಸರ್ವಾರ್ಥಕರ್ತೃ—ಸರ್ವಪ್ರಯೋಜನಕ್ಕೆ ಕರ್ತೃವಾಗಿರ್ಪುದು. ॥ ೨೯ ॥

ಈ ಈಶ್ವರತತ್ವವು ಸರ್ವಾರ್ಥಕರ್ತೃವೆಂಬುದು ಉಪಚಾರವಾದಕಾರಣ, ಈ ತತ್ವದಲ್ಲಿ ಸರ್ವಕರ್ತೃಗಳಾದ ಅನಂತೇಶ್ವರಾದಿಗಳಿದ್ದು, ಅಶುದ್ಧಮಾಯೆಯನ್ನು ಕ್ಷೋಭಿಸಿ, ಸರ್ವಕೃತ್ಯಂಗಳನ್ನು ಮಾಡುವರೆಂಬುದರ್ಥ.

ಶ್ಲೋ॥ ನ್ಯಗ್ಭವತಿಕರ್ತೃಶಕ್ತಿರ್ಜ್ಞಾನಾಖ್ಯೋದ್ರೇಕ ಮಶ್ನುತೇಯತ್ರ|
ತತ್ತತ್ವಂ ವಿದ್ಯಾಖ್ಯಂ ಪ್ರಕಾಶಕಂ ಜ್ಞಾನರೂಪತ್ವಾತ್ ‖ ೨೦ ‖

ಟೀ॥ ಯತ್ರ—ಆವುದಾನೊಂದು ಬಿಂದುವಿನ ನಾಲ್ಕನೆಯ ಪರಿಣಾಮದಲ್ಲಿ, ಕರ್ತೃಶಕ್ತಿಃ—ಶಿವನ ಕ್ರಿಯಾಶಕ್ತಿಯು, ನ್ಯಗ್ಭವತಿ—ಅಲ್ಪವಾಗುತ್ತಿಹುದೋ, ಜ್ಞಾನಾಖ್ಯಾ—ಜ್ಞಾನಶಕ್ತಿಯು, ಉದ್ರೇಕಂ—ಹೆಚ್ಚುಗೆಯನ್ನು, ಅಶ್ನುತೆ—ಎಯ್ದುತ್ತಿಹುದೋ, ತತ್—ಅದು, ವಿದ್ಯಾಖ್ಯಂ—ವಿದ್ಯೆಯೆಂಬ ಹೆಸರನ್ನುಳ್ಳ, ತತ್ವಂ—ತತ್ವವು, ಜ್ಞಾನರೂಪತ್ವಾತ್—ಜ್ಞಾನರೂಪವಹತನದ ದೆಸೆಯಿಂದ, ಪ್ರಕಾಶಕಂ—ಅರುಹಿಸುವಂತಹುದು. ॥ ೨೦ ॥

ಈ ವಿದ್ಯಾತತ್ವವು ಪ್ರಕಾಶಕವೆಂಬುದು ಔಪಚಾರಿಕವಾದ ಕಾರಣವಾಗಿ, ಈ ವಿದ್ಯಾತತ್ವದಲ್ಲಿ ಬೋಧಕವಾಗಿರ್ಪಂಥ ಸಪ್ತಕೋಟಿ ಮಹಾ ಮಂತ್ರಂಗಳೂ ಕಾಮಿಕಾದಿ ವಾತುಲಾಂತವಾದ ಆಗಮಂಗಳೂ ಇಹವೆಂಬುದರ್ಥ.

ಈ ತತ್ವಂಗಳಲ್ಲಿ ಶಿವಜ್ಞಾನ ಕ್ರಿಯಾಶಕ್ತಿಗಳಿಗೆ ಹೆಚ್ಚು ಕುಂದೆಂಬುದು ಮುಖ್ಯವಲ್ಲ. ಅಲ್ಲಿದ್ದ ಕರ್ತೃವಿನ ಜ್ಞಾನಕ್ರಿಯೆಗಳನ್ನು ಹೆಚ್ಚು ಕುಂದಾಗಿ ಮಾಡುವುದಾದ ಕಾರಣ, ಉಪಚಾರವೆಂಬುದರ್ಥ. ಈ ಉಪಾದಾನಕಾರಣವಾದ ಶಿವತತ್ವವು ಶಕ್ತ್ಯಾದಿತತ್ವರೂಪದಿಂದ ಪರಿಣಮಿಸುವುದು ಹಾಲು ಮೊಸರಾದ ಹಾಗೆ ತನ್ನ ಸ್ವರೂಪವು ಕೆಟ್ಟು ಕಾರ್ಯರೂಪವಹುದಲ್ಲ; ತುಪ್ಪದೊಳಗೆ ಹುಳುಗಳು ಹುಟ್ಟುವ ಹಾಗೆ ತನ್ನ ಸ್ವರೂಪವು ಕೆಡದೆ ಶಕ್ತ್ಯಾದಿ ತತ್ವರೂಪವಾಗಿ ಪರಿಣಮಿಸುವುದೆಂದು ತಿಳಿದುಕೊಂಬುದು. ಅಶುದ್ಧಮಾಯೆಯು ಕಲಾದಿ ತತ್ವರೂಪವಾದ ಪರಿಣಾಮವು ಈ ಪ್ರಕಾರವಾದುದೆಂದು ತಿಳಿದುಕೊಂಬುದು.

ಈ ತತ್ವಂಗಳಲ್ಲಿಹ ವಸ್ತುಗಳನ್ನು ಹೇಳುತ್ತಿಹನು:—

ಶ್ಲೋ॥ ನಾದೋಬಿಂದುಸ್ಸಕಲಸ್ಸಾದಾಖ್ಯಂ ತತ್ವಮಾಶ್ರಿತೌ ಕಥಿತೌ।
ವಿದ್ಯೇಶಾಃ ಪುನರೀಶೇ ಮಂತ್ರಾ ವಿದ್ಯಾಶ್ಚ ವಿದ್ಯಾಖ್ಯೇ ॥೩೧॥

ಟೀ॥ ಸಕಲಃ—ಸ್ಥೂಲವಾಗಿರ್ಪಂಥ, ನಾದಃ—ನಾದವೂ, ಬಿಂದುಃ—ಬಿಂದುವೂ, ಸಾದಾಖ್ಯಂ ತತ್ವಂ—ಸದಾಶಿವತತ್ವವನ್ನು, ಆಶ್ರಿತೌ—ಆಶ್ರಯಿಸಿಕೊಂಡಿರುವಂಥವೆಂದು, ಕಥಿತೌ—ಹೇಳಲ್ಪಟ್ಟುವು. ವಿದ್ಯೇಶಾಃಪುನಃ—ಅನಂತ ಸೂಕ್ಷ್ಮ ಶಿವೋತ್ತಮ ಏಕನೇತ್ರ ಏಕರುದ್ರ ತ್ರಿಮೂರ್ತಿ ಶ್ರೀಕಂಠ ಶಿಖಂಡಿಗಳೆಂಬ ವಿದ್ಯೇಶ್ವರರುಗಳು, ಈಶೇ—ಈಶ್ವರ ತತ್ವದಲ್ಲಿ, ಇಹವು. ಮಂತ್ರಾಃ—ಸಪ್ತಕೋಟಿ ಮಂತ್ರಂಗಳೂ, ವಿದ್ಯಾಶ್ಚ—ಕಾಮಿಕಮೊದಲು ವಾತುಲಕಡೆಯಾದ ಇಪ್ಪತ್ತೆಂಟು ಆಗಮಗಳೂ ಕೂಡ, ವಿದ್ಯಾಖ್ಯೇ—ವಿದ್ಯಾತತ್ವದಲ್ಲಿ, ಇಹವು ॥೩೧॥

ಪರಶಿವಂಗೆ ಸದಾಶಿವಾದಿ ಭೇದವು ಶಾಸ್ತ್ರಂಗಳಲ್ಲಿ ಕೇಳಲ್ಪಡುತ್ತಿಹುದು. ಆ ಭೇದವು ಪರಮಾರ್ಥವೊ? ಉಪಚಾರವೊ? ಎಂದು ಸಂದೇಹವಾಗಲಾಗಿ, ಉಪಚಾರವೆಂದು ಹೇಳುತ್ತಿಹನು.

ಶ್ಲೋ॥ ತತ್ವಂವಸ್ತುತ ಏಕಂ ಶಿವಸಂಜ್ಞಂ ಚಿತ್ರಶಕ್ತಿಶತಖಚಿತಂ।
ಶಕ್ತಿವ್ಯಾಪೃತಿಭೇದಾತ್ತಸ್ಯೈತೇ ಕಲ್ಪಿತಾಭೇದಾಃ ॥೩೦॥

ಟೀ॥ ಶಿವಸಂಜ್ಞಂ—ಪರಶಿವನೆಂಬ ಹೆಸರನುಳ್ಳ, ತತ್ವಂ – ಅಧಿಷ್ಠಾತೃರೂಪವಾದ ತತ್ವವು, ವಸ್ತುತಃ – ಪರಮಾರ್ಥದಿಂದ, ಏಕಂ—ಒಂದೆಯಾಗಿರ್ಪುದು. (ಅದೇಕೆಂದೊಡೆ—ಚೇತನನಿಗೆ ಜಡದೋಪಾದಿಯಲ್ಲಿ ನಾನಾರೂಪತ್ವವು ಸಂಭವಿಸದಾ

ದಕಾರಣವಾಗಿ.) ಚಿತ್ರಶಕ್ತಿಶತಖಚಿತಂ—ಉಪಾಧಿಯಿಂದ ನಾನಾಪ್ರಕಾರವಾದ ವಾಮಾದಿಭೇದವುಳ್ಳ ಶಕ್ತಿಯೊಡನೆ ಸಮವೇತವಾಗಿರ್ಪಂತಹುದು. ತಸ್ಯ—ಆ ಪರಶಿವತತ್ವಕ್ಕೆ, ಶಕ್ತಿವ್ಯಾಪೃತಿಭೇದಾತ್—ತನ್ನ ಜ್ಞಾನಕ್ರಿಯಾರೂಪವಾದ ಶಕ್ತಿಯ ಜ್ಞೇಯ ಕರ್ತವ್ಯವೆಂಬ ವ್ಯಾಪಾರಭೇದದ ದೆಸೆಯಿಂದ, ಏತೇಭೇದಾಃ—ಈ ಸದಾಶಿವಾದಿ ಭೇದಂಗಳು, ಕಲ್ಪಿತಾಃ—ಕಲ್ಪಿಸಲ್ಪಟ್ಟಂಥವು ॥ ೩೨ ॥

ಆ ಪರಶಿವನು ಏನು ಕಾರಣವಾಗಿ ಉಪಚಾರದಿಂದ ಸದಾಶಿವಾದಿ ರೂಪಗಳನ್ನು ಎಬ್ಬುವನೆಂದೊಡೆ, ಆತ್ಮರ ಅನುಗ್ರಹಾರ್ಥವೆಂದು ಹೇಳುತ್ತಿಹನು.

ಶ್ಲೋ॥ ಚಿದಚಿದನುಗ್ರಹಹೇತೋಃ ರೂಪಾಣ್ಯೇತಾನಿಸಪ್ರಭುಃಕೃತ್ವಾ ।
ಕುರುತೆ ಚಿತಾಮನುಗ್ರಹ ಮನಾದಿಮಲರುದ್ಧಶಕ್ತೀನಾಂ ॥ ೩೩ ॥

ಟೀ॥ ಸ ಪ್ರಭುಃ—ಆ ಮಹೇಶ್ವರನು, ಚಿದಚಿದನುಗ್ರಹಹೇತೋಃ—ಚಿತ್ತುಗಳ ಅಚಿತ್ತುಗಳ ಅನುಗ್ರಹಾರ್ಥವಾಗಿ, ಏತಾನಿರೂಪಾಣಿ—ಈ ಸದಾಶಿವ ಮೊದಲಾದ ಆಕಾರಗಳನ್ನು, ಕೃತ್ವಾ—ಮಾಡಿ, ಅನಾದಿಮಲರುದ್ಧಶಕ್ತೀನಾಂ—ಅನಾದಿಯಾದ ಮಲದಿಂದ ತಡೆಯಲ್ಪಟ್ಟ ಸಾಮರ್ಥ್ಯವುಳ್ಳಂಥ, ಚಿತಾಂ—ಆತ್ಮರುಗಳಿಗೆ, ಅನುಗ್ರಹಂ—ಮೋಕ್ಷರೂಪವಾದ ಅನುಗ್ರಹವನ್ನು, ಕುರುತೆ—ಮಾಡುತ್ತಿಹನು ॥

ಚಿದಚಿದ್ವಿಷಯವಾದ ಅನುಗ್ರಹಸ್ವರೂಪವನ್ನು ತೋರಿಸುತ್ತಿಹನು.

ಶ್ಲೋ॥ ಭುಕ್ತಿಂಮುಕ್ತಿಮಣೂನಾಂ ಸ್ವವ್ಯಾಪಾರೇ ಸಮರ್ಥತಾಂದಾನಂ ।
ಜಡವರ್ಗಸ್ಯವಿಧತ್ತೇಸರ್ವಾನುಗ್ರಾಹಕಶ್ಶಂಭುಃ ॥ ೩೪ ॥

ಟೀ॥ ಸರ್ವಾನುಗ್ರಾಹಕಃ—ಸಮಸ್ತಕ್ಕೆ ಅನುಗ್ರಾಹಕನಾಗಿರ್ಪ, ಶಂಭುಃ—ಪರಮೇಶ್ವರನು, ಅಣೂನಾಂ—ಆತ್ಮರುಗಳಿಗೆ, ಭುಕ್ತಿಂ—ಭೋಗವನ್ನೂ, ಮುಕ್ತಿಂ—ಮೋಕ್ಷವನ್ನೂ, ವಿಧತ್ತೆ—ಮಾಡುತ್ತಿಹನು. ಜಡವರ್ಗಸ್ಯ—ಜಡಸಮೂಹಕ್ಕೆ, ಸ್ವವ್ಯಾಪಾರೆ—ತಮ್ಮ ಕೆಲಸದಲ್ಲಿ, ಸಮರ್ಥತಾದಾನಂ—ಸಾಮರ್ಥ್ಯೋತ್ಪಾದನವನ್ನು, ವಿಧತ್ತೆ—ಮಾಡುತ್ತಿಹನು ॥ ೩೪ ॥

ಆ ಭೋಗಮೋಕ್ಷಂಗಳಲ್ಲಿ ಮೋಕ್ಷವು ದುಃಖನಿವೃತ್ತಿಗೆ ಕಾರಣವಾದಕಾರಣ, ಅದು ಅನುಗ್ರಹವಾಗಲಿ; ಸುಖದುಃಖರೂಪವಾದ ಭೋಗವು ಹೇಗೆ ಅನುಗ್ರಹವಾದೀತೆಂದೊಡೆ, ಹೇಳುತ್ತಿಹನು.

ಶ್ಲೋ॥ ಚಿದಚಿದನುಗ್ರಹಸ್ತ್ವಯಂಕಿಲಯೋ ಮೋಕ್ಷಶ್ಶಿವ ಸಮಾನತಾರೂಪಃ ।
ಸೋನಾದಿತ್ವಾತ್ಕರ್ಮಣ ಇಹಭೋಗಮೃತೇನಯಾತಿ ಸಂಸಿದ್ಧಿಂ ॥

ಟೀ॥ ಶಿವಸಮಾನತಾರೂಪಃ—ಶಿವನ ಸಾಮರ್ಥ್ಯರೂಪವಾಗಿರ್ಪ, ಯಃ—ಆವುದಾನೊಂದು, ಮೋಕ್ಷಃ—ಮೋಕ್ಷವುಂಟೋ, ಅಯಂ—ಇದು, ಚಿದಚಿದನುಗ್ರಹಃಕಿಲ—ಆತ್ಮರುಗಳ ಅನುಗ್ರಹವೆಂದು ಪ್ರಸಿದ್ಧವು. ಸಃ—ಆ ಮೋಕ್ಷವು, ಇಹ—ಇಲ್ಲಿ, ಕರ್ಮಣಃ ಅನಾದಿತ್ವಾತ್—ಕರ್ಮವು ಅನಾದಿಯಾಗಿಹತನದ ದೆಸೆಯಿಂದ, ಭೋಗಮೃತೆ—ಭೋಗವಿಲ್ಲದೆ, ಸಂಸಿದ್ಧಿಂ—ಅಭಿವ್ಯಕ್ತಿಯನ್ನು, ನಯಾತಿ—ಎಯ್ದುವುದಿಲ್ಲ. ॥ ೩೫ ॥

ಇದುಕಾರಣ, ಪಾಶಂಗಳ ತೊಲಗಿಸಿ, ಸಮಸ್ತಪದಾರ್ಥಂಗಳ ಜ್ಞಾನಕ್ರಿಯಾರೂಪವಾದ ಶಿವತತ್ವವನ್ನು ಪ್ರಕಟಿಸುವ ಮೋಕ್ಷವೇ ಮುಖ್ಯವಾಗಿ ಅನುಗ್ರಹವೆನಿಸಿಕೊಂಬುದು. "ನಾಭುಕ್ತಂಕ್ಷೀಯತೇಕರ್ಮಕಲ್ಪಕೋಟಿ ಶತೈರಪಿ" ಎಂಬ ನ್ಯಾಯದಿಂದ, ಭೋಗವು ಕರ್ಮಕ್ಷಯಕ್ಕೆ ಕಾರಣವಾದುದರಿಂದ, ಪರಂಪರೆಯಿಂ ಮೋಕ್ಷಕ್ಕೆ ಸಾಧನವಾದ ಕಾರಣ, ಇದೂ ಅನುಗ್ರಹವೆಂದು ಹೇಳಲ್ಪಟ್ಟಿತು.

ಶ್ಲೋ॥ ತೇನವಿಭುಸ್ತದ್ಭುಕ್ತ್ಯೈ ಕುರುತೇತನುಕರಣಭುವನನಿಷ್ಪತ್ತಿಂ।

ಟೀ॥ ತೇನ—ಆವುದಾನೊಂದು ಕಾರಣದಿಂದ ಕರ್ಮವುಂಡಲ್ಲದೆ ಹಿಂಗದೋ ಆದರಿಂದ, ವಿಭುಃ—ಪರಮೇಶ್ವರನು, ತದ್ಭುಕ್ತ್ಯೈ—ಆ ಕರ್ಮದ ಭೋಗಾರ್ಥವಾಗಿ, ತನುಕರಣಭುವನನಿಷ್ಪತ್ತಿಂ—ಸೂಕ್ಷ್ಮಶರೀರ ಭುವನಜದೇಹಂಗಳ ಉತ್ಪತ್ತಿಯನ್ನು, ಕುರುತೆ—ಮಾಡುತ್ತಿಹನು.

ಶ್ಲೋ॥ ಕರ್ತ್ರಾವಿನಾನಕಾರ್ಯಂ ನತಥೋಪಾದಾನಕರಣಾಭ್ಯಾಂ ।
ಶಕ್ತಯಇಹಾಸ್ಯಕರಣಂಮಾಯೋಪಾದಾನಮಿಷ್ಯತೇಸೂಕ್ಷ್ಮಾ॥

ಟೀ॥ ಕರ್ತ್ರಾವಿನಾ—ಕರ್ತೃವಿಲ್ಲದೆ, ಕಾರ್ಯಂ ನ—ಕಾರ್ಯವಿಲ್ಲ. ತಥಾ—ಹಾಗೆ, ಉಪಾದಾನಕರಣಾಭ್ಯಾಂ—ಉಪಾದಾನಕರಣಂಗಳಿಲ್ಲದೆ, ಕಾರ್ಯಂ ನ—ಕಾರ್ಯವಿಲ್ಲ. ಇದುಕಾರಣ, ಇಹ—ಈ ಕಾರ್ಯದಲ್ಲಿ ಅಸ್ಯ—ಈ ಶಿವನಿಗೆ, ಶಕ್ತಯಃ-ಶಕ್ತಿಗಳು, ಕರಣಂ—ಕರಣವು. ಸೂಕ್ಷ್ಮಾ—ಅಮೂರ್ತವಾಗಿರ್ಪ, ಮಾಯಾ—ಮಾಯೆಯು, ಉಪಾದಾನಂ—ಉಪಾದಾನವಾಗಿ, ಇಷ್ಯತೆ—ಇಚ್ಛೈಸಲ್ಪಡುತ್ತಿಹುದು ॥ ೩೬ ॥

ಆ ಮಾಯೆಯ ಸ್ವರೂಪವನ್ನು ಹೇಳುತ್ತಿಹನು.

ಶ್ಲೋ॥ ಏಕಾ ನಿತ್ಯಾ ವ್ಯಾಪಿ ನ್ಯನಾದಿನಿಧನಾ ಶಿವಾ ಶಕ್ತಾ ।
ಸಾಧಾರಣೀನರಾಣಾಂಕಾರಣಮಪಿಚೇಯಮಖಿಲಭುವನಾನಾಂ॥
ನಿಖಿಲಜನಕರ್ಮಖಚಿತಾಸ್ವಭಾವತೋಮೋಹಸಂಜನನೀ ॥ ೩೮ ॥

ಟೀ॥ ಏಕಾ—ಒಂದೆಯಾಗಿರ್ಪ ಆ ಮಾಯೆಯು, ನಿತ್ಯಾ—ಕೇಡಿಲ್ಲದೆ ಇರ್ಪುದು, ವ್ಯಾಪಿನೀ—ತನ್ನ ಕಲಾದಿಕಾರ್ಯಕ್ಕೆ ವ್ಯಾಪಕವಾಗಿರ್ಪುದು, ಅನಾದಿನಿಧ

ನಾ—ತನಗೆ ಮೊದಲೂ ಕೇಡೂ ಇಲ್ಲದೆ ಇರ್ಪುದು, ಶಿವಾಶಕ್ತಾ—ಶಿವನಲ್ಲಿ ಸಮವೇತವಲ್ಲದಿರ್ಪುದು (ಜಗತ್ತಿಗೆ ಉಪಾದಾನಕಾರಣದಿಂದ ಬಿಂದುವಿನೋಪಾದಿಯಲ್ಲಿ ಪರಿಗ್ರಹಶಕ್ತಿಯಾಗಿಹುದರಿಂದ ಶಿವನೊಡನೆ ಬೆರಸಿಹುದಲ್ಲವೆಂಬುದರ್ಥ) ನರಾಣಾಂ—ಪುರುಷರುಗಳಿಗೆ, ಇಯಂ—ಈ ಮಾಯೆಯು, ಸಾಧಾರಣೀ—ಸಾಮಾನ್ಯವಾಗಿರ್ಪುದು. ಅಖಿಲಭುವನಾನಾಂ—ಸಮಸ್ತ ಲೋಕಂಗಳಿಗೆ, ಕಾರಣಂ—ಕಾರಣವಾಗಿರ್ಪುದು. ಅಪಿಚ—ಮತ್ತೆಯೂ, ನಿಖಿಲಜನಕರ್ಮಖಚಿತಾ—ಸಮಸ್ತ ಜನರುಗಳ ಕರ್ಮಂಗಳೊಡನೆ ಕೂಡಿರ್ಪುದು, (ಅದು ಹೇಗೆಂದೊಡೆ—ಕರ್ಮಸಂಸ್ಕಾರಂಗಳು ಬುದ್ಧಿಯ ಗುಣಂಗಳಾದಕಾರಣ, ಬುದ್ಧಿಯಲ್ಲಿಹವು. ಆ ಬುದ್ಧಿಯು ಪ್ರಳಯದಲ್ಲಿ ಮಾಯೆಯಲ್ಲಿ ಅಡಗುವುದಾದಕಾರಣ, ಕರ್ಮಂಗಳೊಡನೆ ಕೂಡಿಹುದೆಂಬುದರ್ಥ) ಸ್ವಭಾವತಃ—ಸ್ವಭಾವದಿಂದೆ, ಮೋಹಸಂಜನನೀ—ಮೋಹವನ್ನು ಹುಟ್ಟಿಸುವಂತಹದು. (ಅದು ಹೇಗೆಂದೊಡೆ—ಅನಿತ್ಯ ಅಶುಚಿ ದುಃಖ ಅನಾತ್ಮಗಳಾದ ದೇಹೇಂದ್ರಿಯಾದಿಗಳಲ್ಲಿ ನಿತ್ಯವೆಂಬ ಶುಚಿಯೆಂಬ ಸುಖಿಯೆಂಬ ಆತ್ಮನೆಂಬ ಜ್ಞಾನವನ್ನು ಹುಟ್ಟಿಸುವುದಾದಕಾರಣ ಮೋಹಿಕೆಯೆಂಬುದರ್ಥ) ॥ ೩೮ ॥

ಈ ಅಶುದ್ಧಮಾಯೆಯಿಂ ತತ್ವಂಗಳನ್ನು ಹುಟ್ಟಿಸುವ ಪ್ರಕಾರವನ್ನು ಹೇಳುತ್ತಿಹನು.

ಶ್ಲೋ॥ ಕರ್ಮಾಣ್ಯವೇಕ್ಷ್ಯಶಂಭುರ್ಮಾಯಾಂವಿಕ್ಷೋಭ್ಯಶಕ್ತಿಭಿಸ್ಸ್ವಾಭಿಃ
ಪ್ರತಿಪುರುಷಂಭೋಗಾರ್ಥಂ ವಪೂಂಷಿಕರಣಾನಿಚಾಧತ್ತೆ ॥ ೩೯ ॥

ಟೀ॥ ಶಂಭುಃ—ಶಿವನು, ಕರ್ಮಾಣಿ—ಆತ್ಮರ ಕರ್ಮಂಗಳನ್ನು, ಅವೇಕ್ಷ್ಯ—ಪ್ರಳಯದಲ್ಲಿ ಪಕ್ವವಾಗಿರ್ಪವನ್ನು ನೋಡಿ, ಸ್ವಾಭಿಃ—ತನ್ನ ಶಕ್ತಿಗಳಿಂದ ಅಧಿಷ್ಠಿಸಲ್ಪಟ್ಟ, ಶಕ್ತಿಭಿಃ—ಅನಂತೇಶ್ವರನ ಶಕ್ತಿಗಳಿಂದ, ಮಾಯಾಂ—ಮಾಯೆಯನ್ನು, ವಿಕ್ಷೋಭ್ಯ—ತತ್ವಂಗಳನ್ನು ಹುಟ್ಟಿಸುವುದಕ್ಕೆ ಅಭಿಮುಖವನ್ನು ಮಾಡಿ, ಪ್ರತಿಪುರುಷಂ—ಪ್ರತಿಯೊಬ್ಬ ಪುರುಷನನ್ನು ಕುರಿತು, ಭೋಗಾರ್ಥಂ—ಅನುಭವಿಸುವುದಕ್ಕಾಗಿ, ವಪೂಂಷಿ—ಸ್ಥೂಲಶರೀರಗಳನ್ನು, ಕರಣಾನಿಚ—ಸೂಕ್ಷ್ಮಶರೀರಂಗಳನ್ನು ಕೂಡ, ಆಧತ್ತೆ—ಮಾಡುತ್ತಿಹನು ॥ ೩೯ ॥

ಮಾಯೆಯಿಂದ ತತ್ವಂಗಳು ಸ್ಥೂಲರೂಪಂಗಳಾಗಿಯೂ ಸೂಕ್ಷ್ಮರೂಪಂಗಳಾಗಿಯೂ ಎರಡು ಪ್ರಕಾರವಾಗಿ ಹುಟ್ಟುವುವು. ಅಲ್ಲಿ ಸ್ಥೂಲರೂಪಂಗಳು ಭುವನಂಗಳಿಗೆ ಆಧಾರಂಗಳಾಗಿಹವು. ಸೂಕ್ಷ್ಮರೂಪಂಗಳು ಸೂಕ್ಷ್ಮಶರೀರರೂಪವಾಗಿಹವು. ಆ ಸೂಕ್ಷ್ಮಶರೀರರೂಪವಾದ ಕಾಲ ಮೊದಲಾದ ತತ್ವಂಗಳ ಉತ್ಪತ್ತಿಯನ್ನೂ ಅವರ ಕಾರ್ಯಂಗಳನ್ನೂ ಹೇಳುತ್ತಿಹನು.

ಶ್ಲೋ॥ ನಾನಾವಿಧಶಕ್ತಿಮಯೀಮಾಯಾಜನಯತಿಕಾಲತತ್ವಮೇಪಾದೌ।
ಭಾವಿಭವೋದ್ಭೂತಮಿದಂಕಲಯತಿ ಜಗದೇಷಕಾಲೋಽತಃ ॥೪೦

ಟೀ॥ ನಾನಾವಿಧ ಶಕ್ತಿಮಯಿ—ನಾನಾ ಪ್ರಕಾರವಾದ ಶಕ್ತಿಸ್ವರೂಪವಾಗಿರ್ಪ, ಸಾ—ಆ ಮಾಯೆಯು, ಆದೌ—ಮೊದಲಲ್ಲಿ, ಕಾಲತತ್ವಮೇವ—ಕಾಲತತ್ವವನ್ನೇ, ಜನಯತಿ—ಹುಟ್ಟಿಸುತ್ತಿಹುದು. ಇದಂ—ಈ ಕಾಲತತ್ವವು, ಭಾವಿ—ಆಗಲುಳ್ಳಂತಹದು, ಭವೇತ್—ಆಗುತ್ತಿಹುದು. ಭೂತಂ—ಆದಂತಹದು, ಎಂದು ಮೂರು ರೂಪವಾಗಿರ್ಪುದು. ಏಷಃ—ಈ ಕಾಲವು, ಜಗತ್—ಲೋಕವನ್ನು, ಕಲಯತಿ—ಎಣಿಸುತ್ತಿಹುದು. ಅತಃ—ಇದುಕಾರಣ, ಕಾಲಃ—ಕಾಲವೆನಿಸಿಕೊಂಡಿತು. ॥೪೦॥

ಶ್ಲೋ॥ ನಿಯತಿರ್ನಿಯಮನರೂಪಾ ಮಾಯಾತಸ್ತಸ್ಯನಂತರಂ ಭವತಿ ।
ನಿಯಮಯತಿಯೇನನಿಖಿಲಂತೇನೇಯಂ ನಿಯತಿರಿತ್ಯುಕ್ತಾ ॥೪೧॥

ಟೀ॥ ನಿಯತಿಃ—ನಿಯತಿಯೆಂಬುದು, ನಿಯಮನರೂಪಾ—ನಿಯಮಿಸುವ ಸ್ವರೂಪವಾಗಿರ್ಪುದು, ಸಾ—ಆ ನಿಯತಿಯು, ಮಾಯಾತಃ—ಮಾಯೆಯು ದೆಸೆಯಿಂದ, ಅನಂತರಂ—ಕಾಲತತ್ವದ ಅನಂತರದಲ್ಲಿ, ಭವತಿ—ಆಗುತ್ತಿಹುದು. ಯೇನ—ಅವುದಾನೊಂದು ಕಾರಣದಿಂದ, ಇಯಂ—ಈ ನಿಯತಿಯು, ನಿಖಿಲಂ—ಸಮಸ್ತವನ್ನು, ನಿಯಮಯತಿ—ನಿಯಮಿಸುತ್ತಿಹುದೋ, ತೇನ—ಅದುಕಾರಣದಿಂದ ನಿಯತಿರಿತಿ—ನಿಯತಿಯೆಂದು, ಉಕ್ತಾ—ಹೇಳಲ್ಪಟ್ಟಿತು. ॥೪೧॥

ಶ್ಲೋ॥ ಮಾಯಾತಸ್ತದನುಕಲಾ ಮಲಂನೃಣಾಮೇಕತಸ್ತುಕಲಯಿತ್ವಾ।
ವ್ಯಂಜಯತಿ ಕರ್ತೃಶಕ್ತಿಂಕಲೇತಿ ತೇನೇಹ ಕಥಿತೇಯಂ ॥೪೨॥

ಟೀ॥ ಮಾಯಾತಃ—ಮಾಯೆಯು ದೆಸೆಯಿಂದ, ತದನು—ಆ ನಿಯತಿತತ್ವದ ಅನಂತರದಲ್ಲಿ, ಕಲಾ—ಕಲೆಯು, ಭವತಿ—ಆಗುತ್ತಿಹುದು. ನೃಣಾಂ—ಪುರುಷರುಗಳ, ಮಲಂ—ಮಲವನ್ನು, ಏಕತಸ್ತು—ಒಪ್ಪಚ್ಚಿ, ಕಲಯಿತ್ವಾ—ತೊಲಗಿಸಿ, ಕರ್ತೃಶಕ್ತಿಂ—ಜ್ಞಾನಕ್ರಿಯಾರೂಪವಾದ ಶಕ್ತಿಯನ್ನು, ವ್ಯಂಜಯತಿ—ಪ್ರಕಟಿಸುತ್ತಿಹುದು. ತೇನ—ಆ ಮಲವನ್ನು ತೊಲಗಿಸುವುದರಿಂದ, ಇಹ—ಇಲ್ಲಿ, ಇಯಂ—ಇದು, ಕಲೇತಿ—ಕಲೆಯೆಂದು, ಕಥಿತಾ—ಹೇಳಲ್ಪಟ್ಟಿತು ॥೪೨॥

ಶ್ಲೋ॥ ಕಾಲೇನನಿಯತ್ಯಾಪ್ಯುಪಸರ್ಜನತಾ ಮುಪೇತಯಾಸತತಂ ।
ವಿದಧಾತಿವ್ಯಾಪಾರಂ ನಿಜಮೇಷಾಪ್ಯವನಿಪರ್ಯಂತಂ ॥೪೩॥

ಟೀ॥ ಏಷಾ—ಈ ಕಲೆಯು, ಉಪಸರ್ಜನತಾಂ—ಅಮುಖ್ಯತ್ವವನ್ನು, ಉಪೇತಯಾ—ಹೊಂದಿದಂಥ, ನಿಯತ್ಯಾಚ—ನಿಯತಿಯೊಡನೆಯೂ, ಕಾಲೇನಾಪಿ—ಕಾಲದೊಡನೆಯೂ, ಕೂಡಿ, ನಿಜಂ—ತನ್ನ ಸಂಬಂಧವಾಗಿರ್ಪ, ಅವನಿಪರ್ಯಂತಂ—

ಪೃಥ್ವೀತತ್ವಕಡೆಯಾಗಿರ್ಪ, ವ್ಯಾಪಾರಂ-- ಪುರುಷನ ಭೋಗರೂಪವಾದ ವ್ಯಾಪಾರವನ್ನು, ಸತತಂ— ಆವಾಗಲೂ, ವಿದಧಾತಿ – ಮಾಡುತ್ತಿಹುದು. ॥ ೪೩ ॥

ಕಲೆಯು ಭೋಕ್ತೃವಿನ ಸ್ವರೂಪವನ್ನು ಪ್ರಕಟಿಸುವುದರಿಂದ ಅಂತರಂಗವಾದಕಾರಣ ಮುಖ್ಯವಾಗಿರ್ಪುದು; ಕಾಲನಿಯತಿಗಳ ಸಂಖ್ಯಾನ ನಿಯಮಗಳನ್ನು ಮಾಡುವುದರಿಂದ ಬಹಿರಂಗಗಳಾದಕಾರಣ ಅಮುಖ್ಯಂಗಳೆಂಬುದರ್ಥ.

ಶ್ಲೋ॥ ಉದ್ಬುದ್ಧಕರ್ತೃಶಕ್ತೇಃ ಪುಂಸೋವಿಷಯಪ್ರದರ್ಶನನಿಮಿತ್ತಂ ।
ವಿದ್ಯಾತತ್ವಂಸೂತೇ ಪ್ರಕಾಶರೂಪಂ ಕಲೈವೇಷಾ ॥ ॥೪೪॥

ಟೀ॥ ಉದ್ಬುದ್ಧಕರ್ತೃಶಕ್ತೇಃ – ಕಲೆಯಿಂ ಪ್ರಕಟಿಸಲ್ಪಟ್ಟ ಸಾಮರ್ಥ್ಯವುಳ್ಳಂಥ, ಪುಂಸಃ – ಪುರುಷಂಗೆ, ವಿಷಯಪ್ರದರ್ಶನ ನಿಮಿತ್ತಂ—ವಿಷಯಂಗಳನ್ನು ತೋರಿಸುವುದಕ್ಕೋಸ್ಕರವಾಗಿ, ಏಷಾಕಲೈವ-ಈ ಕಲಾತತ್ವವೇ, ಪ್ರಕಾಶರೂಪಂ-ಪ್ರಕಾಶವಾಗಿರ್ಪ, ವಿದ್ಯಾತತ್ವಂ—ವಿದ್ಯಾತತ್ವವನ್ನು, ಸೂತೆ—ಹಡೆಯುತ್ತಿಹುದು. ॥ ೪೪ ॥

ಶ್ಲೋ॥ ಆವರಣಂಭಿತ್ವೈಷಾಜ್ಞಾನಾಖ್ಯಾಯಾ ಸ್ವಕರ್ಮಣಾಶಕ್ತೇಃ ।
ದರ್ಶಯತಿವಿಷಯಜಾತಂ ಕರಣಂಸೇಹಾತ್ಮನಃಪರಮಂ ॥೪೫॥

ಟೀ॥ ಏಷಾ — ಈ ವಿದ್ಯೆಯು, ಜ್ಞಾನಾಖ್ಯಾಯಾಃಶಕ್ತೇಃ – ಆತ್ಮನ ಕ್ರಿಯಾರೂಪವಾದ ಶಕ್ತಿಯ, ಆವರಣಂ—ವಿಷಯವನ್ನು ಗ್ರಹಿಸಲರಿಯದೆಂಬೀ ಮರೆಯನ್ನು, ಸ್ವಕರ್ಮಣಾ – ತನ್ನ ವ್ಯಾಪಾರದಿಂದ, ಭಿತ್ವಾ – ತೊಲಗಿಸಿ, ವಿಷಯಜಾತಂ – ವಿಷಯಂಗಳ ಸಮೂಹವನ್ನು, ದರ್ಶಯತಿ—ತೋರಿಸುತ್ತಿಹುದು. ಇದು ಕಾರಣವಾಗಿ, ಸಾ — ಆ ವಿದ್ಯೆಯು, ಇಹ— ಈ ಭೋಗರೂಪವಾದ ಕಾರ್ಯದಲ್ಲಿ, ಆತ್ಮನಃ—ಪುರುಷಂಗೆ, ಪರಮಂ— ಅಂತರಂಗವಾಗಿರ್ಪ, ಕರಣಂ – ಕರಣವು ॥

ಆತ್ಮನ ಶಕ್ತಿಯು ಅನಾದಿಯಿಂದಲೂ ಮಲದಿಂದ ತಡೆದಿರ್ಪುದಾದಕಾರಣ, ಕಲೆಯಿಂದ ಮಲನಿವೃತ್ತಿಯಾದರೂ, ವಿದ್ಯೆಯೆಂಬ ಕರಣವಿಲ್ಲದೆ ವಿಷಯವನ್ನು ಹಿಡಿಯಲಾರದಾದಕಾರಣ ವಿದ್ಯೆಯೇ ಮುಖ್ಯವಾದ ಕರಣವೆಂಬುದರ್ಥ.

ಈ ವಿದ್ಯೆಯು ಮುಖ್ಯಕರಣವೆಂಬುದನ್ನು ತೋರಿಸುತ್ತಿಹನು.

ಶ್ಲೋ॥ ಬುದ್ಧಿರ್ಯದಾಸ್ಯಭೋಗ್ಯಾ ಸುಖಾದಿರೂಪಾತದಾಭವೇತ್ಕರಣಂ ।
ವಿದ್ಯೇಯಂ ಕರಣಂಸ್ಯಾದ್ವಿಷಯಗ್ರಹಣೇಪುನರ್ಬುದ್ಧಿಃ ॥೪೬॥

ಟೀ॥ ಅಸ್ಯ—ಈ ಪುರುಷಂಗೆ, ಸುಖಾದಿರೂಪಾ—ಸುಖದುಃಖರೂಪವಾಗಿರ್ಪ, ಬುದ್ಧಿಃ—ಬುದ್ಧಿಯು, ಯದಾ—ಆವಕಾಲದಲ್ಲಿ, ಭೋಗ್ಯಾ—ಭೋಗಿಸಲು ತಕ್ಕಂತಹದು, ಭವೇತ್--ಆಹುದೋ, ತದಾ—ಆ ಕಾಲದಲ್ಲಿ, ಇಯಂವಿದ್ಯಾ—

ಈ ವಿದ್ಯೆಯು, ಕರಣಂ—ಕರಣವು, ಸ್ಯಾತ್—ಆಹುದು. ವಿಷಯಗ್ರಹಣೇಪುನಃ-ಹೊರಗಣ ರೂಪಾದಿವಿಷಯಂಗಳನ್ನು ಗ್ರಹಿಸುವಲ್ಲಿಯಾದೊಡೆ, ಬುದ್ಧಿಃ—ಬುದ್ಧಿಯು, ಕರಣಂ—ಕರಣವು. ॥ ೪೬ ॥

ಇಲ್ಲಿ ಪುರುಷನು ಮನದೊಡನೆ ಕೂಡಿದಂಥ ಇಂದ್ರಿಯಂಗಳಿಂದ ತರಲ್ಪಟ್ಟ ಪದಾರ್ಥವನ್ನು ಬುದ್ಧಿಯೆಂಬ ಕರಣದಿಂದ ನಿಶ್ಚೈಸುವನು. ಆ ನಿಶ್ಚಿತವಾದ ವಿಷಯವುಳ್ಳಂಥ ಬುದ್ಧಿಯನ್ನು ನಾನು ಸುಖಿ ನಾನು ದುಃಖಿಯೆಂದು ಅರಿವಲ್ಲಿ ವಿದ್ಯೆಯೆಂಬ ಕರಣದಿಂದ ಅರಿವನು. ಇದೇ ಪುರುಷನ ಭೋಗವೆಂದು ತಿಳಿದುಕೊಂಬುದು.

ಶ್ಲೋ॥ ರಾಗೋಽಭಿಷ್ವಂಗಾತ್ಮಾ ವಿಷಯಚ್ಛೇದಂವಿನೈವಸಾಮಾನ್ಯಃ ।
ಪುರುಷಪ್ರವೃತ್ತಿಹೇತುರ್ವಿಲಕ್ಷಣೋಬುದ್ಧಿಧರ್ಮೇಭ್ಯಃ ॥೪೭॥

ಟೀ॥ ರಾಗಃ—ರಾಗತತ್ವವು, ಅಭಿಷ್ವಂಗಾತ್ಮಾ—ಅಭಿಲಾಷಾರೂಪವಾದ ಕಾರ್ಯವುಳ್ಳಂಥಹದು. (ವಿಷಯಂಗಳೇ ಅಭಿಲಾಷೆಯು ಹುಟ್ಟಿಸುವವೆಂದು ಕೆಲದರ್ಶನದವರೆಂಬರು. ಅದಲ್ಲವೆಂದು ಹೇಳುತ್ತಿಹನು:--) ವಿಷಯಚ್ಛೇದಂವಿನೈವ—ವಿಷಯಗ್ರಹಣವಿಲ್ಲದೇ, ಸಾಮಾನ್ಯಃ—ಸಾಧಾರಣವಾಗಿರ್ಪುದು. (ಅವೈರಾಗ್ಯರೂಪವಾದ ಬುದ್ಧಿಯ ಧರ್ಮವೇ ಪುರುಷನ ಪ್ರವೃತ್ತಿಗೆ ಕಾರಣವೆಂದು ಕೆಲದರ್ಶನದವರೆಂಬರು. ಅದಲ್ಲವೆಂದು ಹೇಳುತ್ತಿಹನು:—) ಬುದ್ಧಿಧರ್ಮೇಭ್ಯಃ—ಬುದ್ಧಿಯ ಗುಣಂಗಳ ದೆಸೆಯಿಂದ, ವಿಲಕ್ಷಣಃ—ಭಿನ್ನಸ್ವರೂಪವಾಗಿರ್ಪಂಥಹದು. ॥ ೪೭ ॥

ಆತ್ಮಂಗೆ ಉಪಚಾರದಿಂದ ಪುರುಷತತ್ವವೆಂಬ ಹೆಸರು ಬಂದಿತೆಂದು ಹೇಳುತ್ತಿಹನು.:—

ಶ್ಲೋ॥ ತತ್ವೈರೇಭಿಃ ಕಲಿತೋಭೋಕ್ತೃತ್ವದಶಾಂ ಯದಾಪಶುರ್ನೀತಃ ।
ಪುರುಷಾಖ್ಯತಾಂಯದಾಯಂಲಭತೇ ತತ್ವೇಷುಗಣನಾಂಚ ॥೪೮॥

ಟೀ॥ ಪಶುಃ—ಆತ್ಮನು, ಏಭಿಃ ತತ್ವೈಃ – ಕಾಲ ನಿಯತಿ ಕಲೆ ವಿದ್ಯೆ ರಾಗಂಗಳೆಂಬ ಐದ್ದು ತತ್ವಂಗಳಿಂದ, ಕಲಿತಃ—ಕೂಡಿದವನಾಗಿ, ಭೋಕ್ತೃತ್ವದಶಾಂ—ಭೋಕ್ತೃವೆಂಬ ಅವಸ್ಥೆಯನ್ನು, ಯದಾ—ಆವಾಗ, ನೀತಃ—ಎಯ್ದಲ್ಪಟ್ಟನೋ, ತದಾ—ಆಗ, ಅಯಂ—ಈ ಆತ್ಮನು, ಪುರುಷಾಖ್ಯತಾಂ—ಪುರುಷನೆಂಬ ಹೆಸರುಳ್ಳಾತನಹತನವನ್ನು, ತತ್ವೇಷು—ತತ್ವಂಗಳಲ್ಲಿಯು, ಗಣನಾಂಚ—ಗಣನೆಯನ್ನೂ, ಲಭತೆ—ಪಡೆಯುತ್ತಿಹನು. ॥ ೪೮ ॥

ಶ್ಲೋ॥ ಪುರುಷಸ್ಯ ಹಿ ಭೋಗಾರ್ಥಂ ಕಲೈವತಸ್ಮಾತ್ಪ್ರಸೂಯತೇಽ
[ವ್ಯಕ್ತಂ ।
ಅನಭಿವ್ಯಕ್ತಗುಣತ್ವಾದವ್ಯಪದೇಶ್ಯಂತದವ್ಯಕ್ತಂ ॥೪೯॥

ಪುರುಷಸ್ಯ— ಪುರುಷನ, ಭೋಗಾರ್ಥಂ — ಭೋಗಸಾಧನವಾದ ತತ್ವಂಗಳಿಗೋಸ್ಕರ, ಕಲೈವ — ಕಲೆಯೇ, ತಸ್ಮಾತ್ —ಅರಾಗತತ್ವಕ್ಕಿಂತ ಅನಂತರದಲ್ಲಿ, ಅವ್ಯಕ್ತಂ—ಪ್ರಕೃತಿ ತತ್ವವನ್ನು, ಪ್ರಸೂಯತೇಹಿ—ಹಡೆಯುತ್ತಿಹುದೆಂದು ಪ್ರಸಿದ್ಧವು. (ಗುಣಂಗಳೇ ಪ್ರಕೃತಿತತ್ವವೆಂದು ಸಾಂಖ್ಯರೆಂಬರು. ಅದಲ್ಲವೆಂದು ಹೇಳುತ್ತಿಹನು:—) ತತ್ ಅವ್ಯಕ್ತಂ—ಆ ಪ್ರಕೃತಿಯು, ಅನಭಿವ್ಯಕ್ತಗುಣತ್ವಾತ್—ಅವ್ಯಕ್ತಗಳಾದ ಗುಣಗಳುಳ್ಳದಹತನದ ದೆಸೆಯಿಂದ, ಅವ್ಯಪದೇಶ್ಯಂ—ಭೇದವಿಲ್ಲದೆ ಇರ್ಪುದು. ॥ ೪೯ ॥

ಗುಣಂಗಳು ಆ ಪ್ರಕೃತಿಯ ಕಾರ್ಯಂಗಳಾದಕಾರಣ ಭಿನ್ನಂಗಳು. ಪ್ರಕೃತಿಯು ಗುಣಂಗಳಿಗೆ ಕಾರಣವಾಗಿರ್ಪುದಾದಕಾರಣ, ಅವ್ಯಕ್ತರೂಪವೆಂದರ್ಥ.

ಶ್ಲೋ॥ ಅವ್ಯಕ್ತಾದ್ಗುಣತತ್ವಂ ಪ್ರಖ್ಯಾವ್ಯಾಪಾರನಿಯಮರೂಪಮಿಹ ।
ಸತ್ವಂರಜಸ್ತಮೋಪಿಚಸುಖದುಃಖಮೋಹಇತ್ಯಪಿಚ ॥೫೦॥

ಟೀ॥ ಇಹ—ಇಲ್ಲಿ, ಪ್ರಖ್ಯಾವ್ಯಾಪಾರನಿಯಮರೂಪಂ—ಪ್ರಕಾಶ ಪ್ರವೃತ್ತಿ ನಿಯಮರೂಪವಾದ ಕಾರ್ಯಂಗಳುಳ್ಳಂಥ, ಗುಣತತ್ವಂ—ಗುಣತತ್ವವು, ಅವ್ಯಕ್ತಾತ್—ಪ್ರಕೃತಿತತ್ವದ ದೆಸೆಯಿಂದ, ಭವತಿ—ಆಗುತ್ತಿಹುದು. ಆ ಗುಣತತ್ವವು ಅಪಿಚ—ಮತ್ತೂ, ಸತ್ವಂ—ಸತ್ವಗುಣವೆಂದು, ರಜಃ—ರಜೋಗುಣವೆಂದು, ತಮಃ—ತಮೋಗುಣವೆಂದು, ಮೂರು ಪ್ರಕಾರವಾಗಿರ್ಪುದು, ಅಪಿಚ—ಮತ್ತೂ, (ಈ ಗುಣಂಗಳು, ಕ್ರಮದಿಂದ ಸುಖ ದುಃಖ ಮೋಹ ಹೇತುಗಳಾದಕಾರಣ) ಸುಖದುಃಖೆ—ಸುಖದುಃಖಗಳೆಂದು, ಮೋಹ ಇತಿ—ಮೋಹವೆಂದು ಎನಿಸಿಕೊಂಬುವು. ॥ ೫೦ ॥

ಶ್ಲೋ॥ ಭವತಿಗುಣತ್ರಯತೋಧೀರ್ವಿಷಯಾಧ್ಯವಸಾಯರೂಪಿಣೀಚೇಹ ।
ಸಾಪಿತ್ರಿವಿಧಾಗುಣತಃ ಪ್ರಾಕ್ತನಕರ್ಮಾನುಸಾರೇಣ ॥೫೧॥

ಟೀ॥ ಇಹ—ಇಲ್ಲಿ, ಗುಣತ್ರಯತಃ—ಗುಣಗಳ ಮೂರರದೆಸೆಯಿಂದ, ವಿಷಯಾಧ್ಯವಸಾಯರೂಪಿಣೀ—ವಿಷಯಂಗಳ ನಿಶ್ಚಯಜ್ಞಾನರೂಪವಾದ ಕಾರ್ಯವುಳ್ಳಂಥ, ಧೀಶ್ಚ—ಬುದ್ಧಿಯೂ, ಭವತಿ—ಆಗುತ್ತಿಹುದು. ಸಾಪಿ—ಆ ಬುದ್ಧಿಯೂ, ಪ್ರಾಕ್ತನಕರ್ಮಾನುಸಾರೇಣ—ಪೂರ್ವಜನ್ಮದಲ್ಲಿ ಮಾಡಿದ ಕರ್ಮದವಶದಿಂದ, ಗುಣತಃ—ಸತ್ವರಜಸ್ತಮೋಗುಣಗಳ ಆಧಿಕ್ಯದಿಂದ, ತ್ರಿವಿಧಾ—ಸಾತ್ವಿಕಬುದ್ಧಿ ರಾಜಸಬುದ್ಧಿ ತಾಮಸಬುದ್ಧಿಯೆಂದು ಮೂರು ಪ್ರಕಾರವಾದಂಥಹದು, ಭವತಿ—ಆಗುತ್ತಿಹುದು. ॥ ೫೧ ॥

ಶ್ಲೋ॥ ಸ್ಯಾತ್ತ್ರಿವಿಧೋಽಹಂಕಾರೋ ಜೀವನಸಂರಂಭಗರ್ವರೂಪೋಽಯಂ।
ಸಂಭೇದಾದಸ್ಯಸತೋ ವಿಷಯೋವ್ಯವಹಾರ್ಯತಾಮೇತಿ ॥೫೦॥

ಟೀ॥ ತ್ರಿವಿಧಃ—ಮೂರು ಪ್ರಕಾರವಾಗಿರ್ಪ, ಅಹಂಕಾರಃ - ಅಹಂಕಾರವು, ಸ್ಯಾತ್—ಆ ಬುದ್ಧಿಯ ದೆಸೆಯಿಂದಹುದು. ಅಯಂ—ಈ ಅಹಂಕಾರವು, ಜೀವನಸಂರಂಭಗರ್ವರೂಪಃ—ಪ್ರಾಣಾದಿವಾಯುಗಳನ್ನು ಪ್ರೇರಿಸುತ್ತಿಹುದು ಜೀವನರೂಪವೆನಿಸಿಕೊಂಬುದು ಪುರುಷನ ಪ್ರಯತ್ನಕ್ಕೆ ಕಾರಣವಾದುದು ಸಂರಂಭವೆನಿಸಿಕೊಂಬುದು ನಾನು ಎಂಬ ಜ್ಞಾನಕ್ಕೆ ಕಾರಣವಾದುದು ಗರ್ವವೆನಿಸಿಕೊಂಬುದು. ಸತಃ—ಉಂಟಾಗಿರ್ಪಂಥ, ಅಸ್ಯ—ಈ ಅಹಂಕಾರದ, ಸಂಭೇದಾತ್—ಸಂಪರ್ಕದ ದೆಸೆಯಿಂದ, ವಿಷಯಃ—ಶಬ್ದಾದಿ ವಿಷಯವು, ವ್ಯವಹಾರ್ಯತಾಂ—ಶಬ್ದವನಾಸರಿದೆನು ರೂಪವನಾಸರಿದೆಸು ಎಂಬಿವು ಮೊದಲಾದ ವ್ಯವಹಾರಕ್ಕೆ ಯೋಗ್ಯವಹತನವನ್ನು, ಏತಿ—ಐಯ್ದುವುದು. ಇದುಕಾರಣ, ಪುರುಷಂಗೆ ಸುಖದುಃಖಂಗಳ ವೇದನಾರೂಪವಾದ ಭೋಗವು ಅಹಂಕಾರದಿಂದ ಅಹುದೆಂಬುದರ್ಥ ॥೫೦॥

ಶ್ಲೋ॥ ಸಾತ್ವಿಕರಾಜಸತಾಮಸಭೇದೇನ ಸಜಾಯತೆಪುನಸ್ತ್ರೇಧಾ।
ಸಚತೈಜಸವೈಕಾರಿಕಭೂತಾದಿಕನಾಮಭಿಸ್ಸಮುಚ್ಛ್ಯಸತಿ॥೫೩॥

ಟೀ॥ ಸಃ—ಆ ಅಹಂಕಾರವು, ಪುನಃ—ಮತ್ತೆಯೂ, ಸಾತ್ವಿಕರಾಜಸತಾಮಸಭೇದೇನ—ಸಾತ್ವಿಕಾಹಂಕಾರ ರಾಜಸಾಹಂಕಾರ ತಾಮಸಾಹಂಕಾರವೆಂಬ ಭೇದದಿಂದ, ತ್ರೇಧಾ—ಮೂರು ಪ್ರಕಾರವಾದಂತಹದಾಗಿ, ಜಾಯತೆ—ಹುಟ್ಟುತ್ತಿಹುದು. ಸಚ—ಆ ಅಹಂಕಾರವು ಕೂಡ, ತೈಜಸವೈಕಾರಿಕ ಭೂತಾದಿಕನಾಮಭಿಃ—ಕ್ರಮದಿಂದ ತೈಜಸ ವೈಕಾರಿಕ ಭೂತಾದಿಕವೆಂಬ ಹೆಸರುಗಳಿಂದ, ಸಮುಚ್ಛ್ಯಸತಿ—ಹೇಳಿಸಿಕೊಳ್ಳುತ್ತಿಹುದು. ॥೫೩॥

ಸಾತ್ವಿಕಾಹಂಕಾರವು ತೈಜಸಾಹಂಕಾರವೆಂದು ಹೇಳಿಸಿಕೊಂಬುದು. ರಾಜಸಾಹಂಕಾರವು ವೈಕಾರಿಕಾಹಂಕಾರವೆಂದು ಹೇಳಿಸಿಕೊಂಬುದು. ತಾಮಸಾಹಂಕಾರವು ಭೂತಾದಿಕಾಹಂಕಾರವೆಂದು ಹೇಳಿಸಿಕೊಂಬುದೆಂದರ್ಥ.

ಶ್ಲೋ॥ ತೈಜಸತಸ್ತತ್ರಮನೋವೈಕಾರಿಕತೋ ಭವಂತಿಚಾಕ್ಷಾಣಿ।
ಭೂತಾದೇಸ್ತನ್ಮಾತ್ರಾಣ್ಯೇಷಾಂ ಸರ್ಗೋಽಯಮೇತಸ್ಮಾತ್॥೫೪॥

ಟೀ॥ ತತ್ರ—ಆ ಮೂರು ಅಹಂಕಾರಗಳಲ್ಲಿ, ತೈಜಸತಃ—ತೈಜಸಾಹಂಕಾರದ ದೆಸೆಯಿಂದ, ಮನಃ—ಮನಸ್ಸು, (ಜ್ಞಾನೇಂದ್ರಿಯಂಗಳು) ಭವಂತಿ—ಆಗುತ್ತಿಹವು. ವೈಕಾರಿಕತಃ—ವೈಕಾರಿಕಾಹಂಕಾರದ ದೆಸೆಯಿಂದ, ಅಕ್ಷಾಣಿಚ—ಕರ್ಮೇಂ

ದ್ರಿಯಂಗಳೂ, ಭವಂತಿ—ಆಗುತ್ತಿಹವು. ಭೂತಾದೇಃ—ಭೂತಾದಿಯೆಂಬ ಅಹಂಕಾರದ ದೆಸೆಯಿಂದ, ತನ್ಮಾತ್ರಾಣಿ—ತನ್ಮಾತ್ರಂಗಳು, ಭವಂತಿ—ಆಗುತ್ತಿಹವು. ಏತಷಾಂ—ಈ ಮನಸ್ಸು ಮೊದಲಾದ ತತ್ವಂಗಳ, ಅಯಂಸರ್ಗಃ—ಈ ಸೃಷ್ಟಿಯು, ಏತಸ್ಮಾತ್—ಈ ಅಹಂಕಾರದ ದೆಸೆಯಿಂದ, ಭವತಿ—ಆಗುತ್ತಿಹುದು. ॥೩೪॥

ಶ್ಲೋ॥ ಇಚ್ಛಾ ರೂಪಂಹಿಮನೋವ್ಯಾಪಾರಸ್ತಸ್ಯಭವತಿಸಂಕಲ್ಪಃ ।
ಬುದ್ಧ್ಯಕ್ಷಾಣಿಶ್ರೋತ್ರಂತ್ವಗ್ದೃಗ್ಜಿಹ್ವಾಚನಾಸಾಚ ॥೩೫॥

ಟೀ॥ ಮನಃ—ಮನಸ್ಸು, ಇಚ್ಛಾರೂಪಂಹಿ—ಇಚ್ಛಾರೂಪವಾಗಿರ್ಪಂತಹದೆಂದು ಪ್ರಸಿದ್ಧವು. ತಸ್ಯ—ಆ ಮನಕ್ಕೆ, ಸಂಕಲ್ಪಃ—ಸಂಕಲ್ಪವು, ವ್ಯಾಪಾರಃ—ವ್ಯಾಪಾರವು, ಭವತಿ—ಆಗುತ್ತಿಹುದು. ಶ್ರೋತ್ರಂ—ಶ್ರೋತ್ರವು. ತ್ವಕ್—ತ್ವಗಿಂದ್ರಿಯವು, ದೃಕ್—ನೇತ್ರವು, ಜಿಹ್ವಾಚ—ಜಿಹ್ವೆಯೂ, ನಾಸಾಚ—ನಾಸಿಕವೂ ಕೂಡ, ಬುದ್ಧ್ಯಕ್ಷಾಣಿ—ಜ್ಞಾನೇಂದ್ರಿಯಂಗಳು. ॥೩೫॥

ಶ್ಲೋ॥ ಗ್ರಾಹ್ಯಸ್ತೇಷಾಂಶಬ್ದಸ್ಪರ್ಶೋರೂಪಂರಸಶ್ಚಗಂಧಶ್ಚ ।
ಇತ್ಯೇತೇಷಾಂವಿಷಯಾಃ ಕ್ರಮೇಣಪಂಚಾಪಿಪಂಚಾನಾಂ ॥೩೬॥

ಟೀ॥ ತೇಷಾಂ—ಆಜ್ಞಾನೇಂದ್ರಿಯಂಗಳಿಗೆ, ಗ್ರಾಹ್ಯಃ—ಗ್ರಹಿಸಲು ತಕ್ಕಂಥ ಶಬ್ದಃ—ಶಬ್ದವು, ಸ್ಪರ್ಶಃ—ಸ್ಪರ್ಶವು, ರೂಪಂ—ರೂಪವು, ರಸಶ್ಚ—ರಸವೂ, ಗಂಧಶ್ಚ—ಗಂಧವೂ, ಇತಿ—ಹೀಗೆಂಬ, ಪಂಚಾಪಿ—ಐಯ್ದುಕೂಡ, ಏತೇಷಾಂಪಂಚಾನಾಂ—ಈ ಪಂಚೇಂದ್ರಿಯಂಗಳಿಗೆ, ಕ್ರಮೇಣ—ಕ್ರಮದಿಂದ, ವಿಷಯಾಃ—ವಿಷಯಂಗಳು. ॥೩೬॥

ಶ್ಲೋ॥ ಶಬ್ದಾದೀನಾಂಗ್ರಹಣಂವ್ಯಾಪಾರಃಕೀರ್ತಿತಃಕ್ರಮೇಣೈಷಾಂ ।
ವಾಕ್ಪಾಣಿಪಾದಪಾಯೂಪಸ್ಥಾಃ ಕರ್ಮೇಂದ್ರಿಯಾಣಿಸ್ಯುಃ ॥೩೭॥

ಟೀ॥ ಏಷಾಂ—ಈ ಜ್ಞಾನೇಂದ್ರಿಯಂಗಳಿಗೆ, ಶಬ್ದಾದೀನಾಂ—ಶಬ್ದಾದಿ ವಿಷಯಗಳ, ಗ್ರಹಣಂ—ಗ್ರಹಣವು, ಕ್ರಮೇಣ—ಕ್ರಮದಿಂದ, ವ್ಯಾಪಾರಃ—ವ್ಯಾಪಾರವೆಂದು, ಕೀರ್ತಿತಃ—ಹೇಳಲ್ಪಟ್ಟಿತು. ಕರ್ಮೇಂದ್ರಿಯಾಣಿ—ಕರ್ಮೇಂದ್ರಿಯಂಗಳು, ವಾಕ್ಪಾಣಿಪಾದಪಾಯೂಪಸ್ಥಾನಿ—ವಾಕ್ಕು ಪಾಣಿ ಪಾದ ಪಾಯು ಉಪಸ್ಥಂಗಳು, ಸ್ಯುಃ—ಆಹವು. ॥೩೭॥

ಶ್ಲೋ॥ ವಚನಾದಾನವಿಹರಣೋತ್ಸರ್ಗಾನಂದಾಶ್ಚ ಕರ್ಮೈಷಾಂ ।
ಅಂತಃಕರಣಂತ್ರೇಧಾಬುದ್ಧಿರಹಂಕಾರಚೇತಸೀಚೇತಿ ॥೩೮॥

ಟೀ॥ ವಚನಾದಾನವಿಹರಣೋತ್ಸರ್ಗಾನಂದಾಶ್ಚ—ವಚನ—ನುಡಿವುದು, ಆದಾನ—ತೆಗೆದುಕೊಂಬುದು, ವಿಹರಣ—ನಡೆವುದು, ಉತ್ಸರ್ಗ—ಮಲವಬಿಡುವುದು,

ಆನಂದಾಖ್ಯ—ಆನಂದವೆಂಬಿವುಗಳೂ, ಏಷಾಂ—ಈ ಕರ್ಮೇಂದ್ರಿಯಂಗಳ, ಕರ್ಮ—ವ್ಯಾಪಾರವು. (ಇವರಲ್ಲಿ ಅಂತಃಕರಣ ಬಹಿಃಕರಣಂಗಳೆಂಬ ಭೇದವನ್ನು ಹೇಳುತ್ತಿಹನು:—) ಅಂತಃಕರಣಂ—ಅಂತಃಕರಣವು, ಬುದ್ಧಿಃ—ಬುದ್ಧಿಯೆಂದು, ಅಹಂಕಾರಚೇತಸೀಚೇತಿ—ಅಹಂಕಾರವೆಂದೂ, ಮನಸ್ಸೆಂದೂ, ತ್ರೇಧಾ—ಮೂರು ಪ್ರಕಾರವಾಗಿರ್ಪುದು. ॥೫೮॥

ಶ್ಲೋ॥ ಬುದ್ಧೀಂದ್ರಿಯಕರ್ಮೇಂದ್ರಿಯಭೇದಾದ್ಬಾಹ್ಯಂಭವೇತ್ಪುನರ್ದಶಧಾ
ತನ್ಮಾತ್ರೇಭ್ಯಃಖಪವನತೇಜೋಽಂಭಃಕ್ಷಿತಿಪಂಚಭೂತಾನಿ ॥೫೯

ಟೀ॥ ಬಾಹ್ಯಂಪುನಃ—ಬಾಹ್ಯಕರಣವಾದರೊ, ಬುದ್ಧೀಂದ್ರಿಯಕರ್ಮೇಂದ್ರಿಯಭೇದಾತ್—ಜ್ಞಾನೇಂದ್ರಿಯಂಗಳು ಕರ್ಮೇಂದ್ರಿಯಂಗಳೆಂಬ ಭೇದದ ದೆಸೆಯಿಂದ, ದಶಧಾ—ಹತ್ತು ಪ್ರಕಾರವಾಗಿ, ಭವೇತ್—ಅಹುದು. ತನ್ಮಾತ್ರೇಭ್ಯಃ—ತನ್ಮಾತ್ರಂಗಳ ದೆಸೆಯಿಂದ, ಖಪವನತೇಜೋಽಂಭಃಕ್ಷಿತಿಪಂಚಭೂತಾನಿ ಆಕಾಶ ವಾಯು ಅಗ್ನಿ ಜಲ ಭೂಮಿಯೆಂಬ ಅಯ್ದು ಭೂತಂಗಳು, ಭವಂತಿ—ಆಗುತ್ತಿಹವು ॥೫೯॥

ಈ ಭೂತಂಗಳಿಗೆ ಕಾರಣಂಗಳಾದ ತನ್ಮಾತ್ರಂಗಳು ಆವರೂಪದಿಂದಿಹವೆಂದೊಡೆ ಪೇಳುತ್ತಿಹನು:—

ಶ್ಲೋ॥ ತನ್ಮಾತ್ರಾಣ್ಯವಿಶೇಷಾಶ್ಶಬ್ದಾದೀನಾಂಪ್ರಕೀರ್ತಿತಾಃಪಂಚ ।
ಭೂತಾನಿಪಂಚತೇಭ್ಯೋಭವಂತಿತಾನ್ಯೇಕಗುಣವೃದ್ಧ್ಯಾ ॥೬೦॥

ಟೀ॥ ಶಬ್ದಾದೀನಾಂ—ಶಬ್ದ ಸ್ಪರ್ಶ ರೂಪ ರಸ ಗಂಧಂಗಳ, ಅವಿಶೇಷಾಃ—ಅವ್ಯಕ್ತಂಗಳಾದ ಸೂಕ್ಷ್ಮರೂಪಂಗಳು, ಪಂಚತನ್ಮಾತ್ರಾಣಿ—ಅಯ್ದು ತನ್ಮಾತ್ರಂಗಳೆಂದು, ಪ್ರಕೀರ್ತಿತಾಃ—ಹೇಳಲ್ಪಟ್ಟವು. (ಇಲ್ಲಿ ಶಬ್ದಾದಿ ತನ್ಮಾತ್ರಂಗಳೆಂಬುವು, ಶ್ರೋತ್ರಾದೀಂದ್ರಿಯಗಳಿಂದ ಗ್ರಹಿಸಿಕೊಂಬಂಥ ಆಕಾಶಾದಿಭೂತಂಗಳ ಕಾರ್ಯಂಗಳಾದ ಶಬ್ದಾದಿಗಳಲ್ಲ. ಆ ಭೂತಂಗಳಿಗೆ ಕಾರಣಂಗಳಾಗಿರ್ಪ ಅವ್ಯಕ್ತಂಗಳಾದ ಶಬ್ದಾದಿಗುಣಗಳುಳ್ಳಂಥ ಸೂಕ್ಷ್ಮರೂಪಂಗಳೇ ತನ್ಮಾತ್ರಂಗಳೆಂಬುದರ್ಥ. ಇನ್ನು ಸೂಕ್ಷ್ಮರೂಪಂಗಳಾಗಿ ಕಾರಣಂಗಳಾಗಿರ್ಪಂಥ ತನ್ಮಾತ್ರಂಗಳ ದೆಸೆಯಿಂದ ಸ್ಥೂಲರೂಪಂಗಳಾದ ಪಂಚಭೂತಂಗಳು ಹುಟ್ಟಿದವೆಂದು ಹೇಳುತ್ತಿಹನು:—) ತಾನಿ ಪಂಚಭೂತಾನಿ—ಆ ಆಕಾಶಾದಿ ಪಂಚಭೂತಂಗಳು, ತೇಭ್ಯಃ—ಆ ಶಬ್ದಾದಿ ತನ್ಮಾತ್ರಂಗಳ ದೆಸೆಯಿಂದ, ಏಕಗುಣವೃದ್ಧ್ಯಾ—ಒಂದೊಂದು ಗುಣದ ಹೆಚ್ಚುಗೆಯಿಂದ, ಭವಂತಿ—ಆಗುತ್ತಿಹವು. (ಎಂದರೆ, ಶಬ್ದವೊಂದುಗುಣವುಳ್ಳುದು ಆಕಾಶವು, ಶಬ್ದ ಸ್ಪರ್ಶ ಗುಣವುಳ್ಳುದು ವಾಯುವು, ಶಬ್ದ ಸ್ಪರ್ಶ ರೂಪ ಗುಣವುಳ್ಳುದು ಅಗ್ನಿಯು, ಶಬ್ದ ಸ್ಪರ್ಶ ರೂಪ ರಸ ಗುಣವುಳ್ಳುದು ಜಲವು, ಶಬ್ದ ಸ್ಪರ್ಶ ರೂಪ ರಸ ಗಂಧ ಗುಣವುಳ್ಳುದು ಪೃಥ್ವಿಯೆಂಬುದರ್ಥ.) ॥೬೦॥

ಈ ಪಂಚಭೂತಂಗಳ ವ್ಯಾಪಾರಂಗಳನ್ನು ಹೇಳುತ್ತಿಹನು:—

ಶ್ಲೋ॥ ಅವಕಾಶವ್ಯೂಹನಪಾಕಸಂಗ್ರಹಣಧಾರಣಾಃಕ್ರಮಾದೇಷಾಂ ।
ವ್ಯಾಪಾರಾಭೂತಾನಾಂವ್ಯೋಮಾದೀನಾಂಸಮುದ್ದಿಷ್ಟಾಃ ॥೬೧॥

ಟೀ॥ ಅವಕಾಶವ್ಯೂಹನಪಾಕಸಂಗ್ರಹಣಧಾರಣಂ—ಅವಕಾಶ—ತೆರಪಕೊಡುವುದು, ವ್ಯೂಹನ—ಅವಯುವಂಗಳ ಗಟ್ಟಿ ಮಾಡುವುದು, ಪಾಕ—ಪಾಕವಮಾಡುವುದು, ಸಂಗ್ರಹಣ—ಮುದ್ದೆಯ ಮಾಡುವುದು, ಧಾರಣಂ—ಧರಿಸಿಕೊಂಡಿಹುದು—ಎಂಬಿವು, ಕ್ರಮಾತ್—ಕ್ರಮದಿಂದ, ವ್ಯೋಮಾದೀನಾಂ—ಆಕಾಶಮೊದಲಾಗಿರ್ಪ, ಏಷಾಂಭೂತಾನಾಂ—ಈ ಭೂತಂಗಳ, ವ್ಯಾಪಾರಾಃ—ಉದ್ಯೋಗಂಗಳೆಂದು, ಸಮುದ್ದಿಷ್ಟಾಃ—ಹೇಳಲ್ಪಟ್ಟವು. ॥೬೧॥

ಈ ತನ್ಮಾತ್ರಂಗಳೂ ಭೂತಂಗಳೂ ಸಹ ಇಂದ್ರಿಯಂಗಳಿಗೆ ಆಧಾರಂಗಳಾಗಿಹವೆಂದು ಹೇಳುತ್ತಿಹನು:—

ಶ್ಲೋ॥ ಕಾರ್ಯಮಿದಂದಶಧಾಯತ್ತತ್ಕರಣೈಃ ಕಾರ್ಯತೇಸಮಾವಿಶ್ಯ ।
ಕರಣಾನ್ಯಸಮರ್ಥತ್ವಾತ್ಕಾರ್ಯಂಸಂಶ್ರಿತ್ಯಚೇಷ್ಟಂತೆ ॥೬೨॥

ಟೀ॥ ಕಾರ್ಯಂ—ಕಾರ್ಯರೂಪವಾಗಿರ್ಪಂಥ, ದಶಧಾ—ಹತ್ತು ಪ್ರಕಾರವಾಗಿರ್ಪಂಥ, ಯದಿದಂ—ಆ ಈ ಅವುದಾನೊಂದು ತನ್ಮಾತ್ರಪಂಚಕಭೂತಪಂಚಕವುಂಟೋ, ತತ್—ಅದು, ಕರಣೈಃ—ಶ್ರೋತ್ರಾದಿಕರಣಂಗಳೊಡನೆ, ಸಮಾವಿಶ್ಯ—ಕೂಡಿ, ಕಾರ್ಯತೆ—ವ್ಯಾಪರಿಸುತ್ತಿಹುದು. ಕರಣಾನಿ—ಶ್ರೋತ್ರಾದಿಕರಣಂಗಳು, ಅಸಮರ್ಥತ್ವಾತ—ತಾವೇ ಶಬ್ದಾದಿಗಳನಸುಗ್ರಹಿಸುವಲ್ಲಿ ಅಸಮರ್ಥಂಗಳಹತನದ ದೆಸೆಯಿಂದ, ಕಾರ್ಯಂ—ತನ್ಮಾತ್ರರೂಪವಾದ ಕಾರ್ಯವನ್ನು, ಸಂಶ್ರಿತ್ಯ—ಆಶ್ರೈಸಿ, ಚೇಷ್ಟಂತೆ—ತಮ್ಮ ವ್ಯಾಪಾರಂಗಳನ್ನು ಮಾಡುತ್ತಿಹವು. ॥ ೬೨ ॥

ತನ್ಮಾತ್ರಂಗಳೂ ಭೂತಂಗಳೂ ಸಹ, ರತ್ನಕ್ಕೆ ಹೊಂಬೇಕುಂದಣಂಗಳು ಹೇಗೋ ಹಾಗೆ ಇಂದ್ರಿಯಂಗಳಿಗೆ ಆಧಾರವಾಗಿದ್ದು, ಆ ಇಂದ್ರಿಯಂಗಳಿಂದ ಶಬ್ದಾದಿವಿಷಯಗ್ರಹಣವನ್ನು ಮಾಡಿಸುತ್ತಿಹವೆಂಬುದರ್ಥ.

ಈ ಹಿಂದೆ ಹೇಳಿದ ಮೂವತ್ತಾರು ತತ್ವಂಗಳನ್ನು ಸಾಧರ್ಮ್ಯದಿಂದ ವರ್ಣಿಸುತ್ತಿಹನು:—

ಶ್ಲೋ॥ ಪಂಚಾನಾಮಾದ್ಯಾನಾಂಚಿದ್ರೂಪತಯಾನ್ವಯಃಪರೇಷಾಂತು ।
ಮಾಯಾದೀನಾಂದ್ವೇಧಾಸಪ್ತಾನಾಂಕೀರ್ತಿತಶ್ಚೈವೆ ॥೬೩॥

ಟೀ॥ ಆದ್ಯಾನಾಂ—ಮೊದಲನೆಯುವಾಗಿರ್ಪ, ಪಂಚಾನಾಂ-ಶಿವತತ್ವ ಮೊದಲಾದ ಅಯ್ದು ತತ್ವಂಗಳಿಗೆ, ಚಿದ್ರೂಪತಯಾ—ಚಿದ್ರೂಪಕಾರಿಗಳಹತನದಿಂದ,

ಅನ್ವಯಃ—ಜಾತಿಯು, (ಶಿವತತ್ವ ಮೊದಲು ವಿದ್ಯಾತತ್ವಕಡೆಯಾದ ಅಯ್ದು ತತ್ವಂಗಳು ತಮ್ಮಲ್ಲಿರ್ಪ ಭುವನಂಗಳನೆಯ್ದಿದ ಆತ್ಮರುಗಳಿಗೆ ಸರ್ವಜ್ಞತ್ವ ಸರ್ವಕರ್ತೃತ್ವ ಪ್ರಕಟನಕ್ಕೆ ಸಾಧನಗಳಹುದರಿಂದ ಚಿದ್ರೂಪಗಳೆಂಬುದರ್ಥ.) ಪರೇಷಾಂ—ಅನ್ಯಗಳಾಗಿರ್ಪ, ಮಾಯಾದೀನಾಂಸಪ್ತಾನಾಂತು—ಮಾಯೆ ಮೊದಲು ಪುರುಷತತ್ವ ಕಡೆಯಾದ ಏಳಕ್ಕಾಯಿತಾದರೆ, ದ್ವೇಧಾ—ಆತ್ಮರುಗಳಿಗೆ ಕಿಂಚಿಜ್ಞತ್ವ ಕಿಂಚಿತ್ಕರ್ತೃತವನ್ನು ಪ್ರಕಟಿಸುವುದರಿಂದ, ಚಿದುಪಕಾರಿತ್ವದಿಂದಲೂ ಸುಖದುಃಖಮೋಹವನ್ನು ಹುಟ್ಟಿಸುವಹತನದ ದೆಸೆಯಿಂದಲೂ ಸಹ ಎರಡು ಪ್ರಕಾರವಾದ, ಅನ್ವಯಃ—ಜಾತಿಯು, ಶೈವೆ—ಶಿವಾಗಮದಲ್ಲಿ, ಕೀರ್ತಿತಃ—ಹೇಳಲ್ಪಟ್ಟಿತು. ॥೬೩॥

ಶ್ಲೋ॥ ಅವ್ಯಕ್ತಪ್ರಭೃತೀನಾಂ ಗುಣೈಸ್ತುಸುಖದುಃಖ ಮೋಹರೂಪ [ತಯಾ ।
ಅನ್ವಯಇಹ ನಿಖಿಲಾನಾಂ ದಶಕೇಽಪ್ಯಂತ್ಯೇ ವಿಶೇಷೋಽಯಂ ॥೬೪॥

ಟೀ॥ ಇಹ—ಇಲ್ಲಿ, ಅವ್ಯಕ್ತಪ್ರಭೃತೀನಾಂ—ಪ್ರಕೃತಿ ಮೊದಲಾಗಿರ್ಪ, ನಿಖಿಲಾನಾಂ—ಸಮಸ್ತ ತತ್ವಗಳಿಗೆ, ಗುಣೈಃ—ಗುಣಂಗಳಿಂದ, ಸುಖದುಃಖಮೋಹರೂಪತಯಾ-ಸುಖದುಃಖಮೋಹಂಗಳನ್ನು ಹುಟ್ಟಿಸುವಹತನದಿಂದ, ಅನ್ವಯಃ—ಜಾತಿಯು, ಅಂತ್ಯೇ—ಕಡೆಯವಾಗಿರ್ಪ, ದಶಕೇ—ತನ್ಮಾತ್ರಭೂತಂಗಳೆಂಬ ಹತ್ತರಲ್ಲಿ, ಅಯಂವಿಶೇಷಃ—ಇದು ವಿಶೇಷವು. ॥೬೪॥

ಆ ವಿಶೇಷವಾವುದೆಂದೊಡೆ ಹೇಳುತ್ತಿಹನು.—

ಶ್ಲೋ॥ ಶಬ್ದಾದೌಗುಣಸಾಮ್ಯೇ ತುಲ್ಯತ್ವೇ ಚಾನ್ವಯೋಽತ್ರವಿಜ್ಞೇಯಃ ।
ಅಂಗಾಂಗಿಭಾವವಿಹಿತೋ ಭವತಿ ವಿಶೇಷಶ್ಚ ಕೇಷಾಂಚಿತ್ ॥೬೫॥

ಟೀ॥ ಶಬ್ದಾದೌ—ಶಬ್ದತನ್ಮಾತ್ರೆ ಮೊದಲಾಗಿ ಪೃಥ್ವಿಕಡೆಯಾದ ಹತ್ತರಲ್ಲಿ, ಗುಣಸಾಮ್ಯೇ—ಶಬ್ದಾದಿ ಗುಣಸಾಮ್ಯದಲ್ಲಿಯೂ, ತುಲ್ಯತ್ವೇಚ—ಕಾರ್ಯಂಗಳೆನಿಸಿಕೊಂಬ ಸಮಾನತ್ವದಲ್ಲಿಯೂ, ಅತ್ರ—ಇಲ್ಲಿ ಅನ್ವಯಃ-ಸಾಧರ್ಮ್ಯವು, ವಿಜ್ಞೇಯಃ-ಅರಿಯಲು ತಕ್ಕಂತಹದು. ಕೇಷಾಂಚಿತ್—ಕೆಲವಿಂಪು ಮಾಯಾದಿ ತತ್ವಂಗಳಿಗೆ, ಅಂಗಾಂಗಿಭಾವವಿಹಿತಃ—ಅಮುಖ್ಯಮುಖ್ಯತ್ವದಿಂದ ಮಾಡಲ್ಪಟ್ಟ, ವಿಶೇಷಶ್ಚ—ವಿಶೇಷವೂ, ಭವತಿ—ಆಗುತ್ತಿಹುದು. ॥೬೫॥

ಬಿಂದು ಮಾಯೆ ಪ್ರಕೃತಿಗಳು ಕಾರಣರೂಪಂಗಳಾದಕಾರಣ ಮುಖ್ಯಂಗಳು. ಶಕ್ತಿತತ್ವ ಮೊದಲಾದ ನಾಲ್ಕು ತತ್ವಂಗಳೂ, ಕಲಾತತ್ವ ಮೊದಲಾದ ಅಯ್ದು ತತ್ವಂಗಳೂ, ಗುಣತತ್ವ ಮೊದಲಾದ ಇಪ್ಪತ್ತನಾಲ್ಕು ತತ್ವಂಗಳೂ ಸಹ ಕಾರ್ಯಂಗಳಾದಕಾರಣ, ಅಮುಖ್ಯಂಗಳೆಂಬುದರ್ಥ.

ಶ್ಲೋ॥ ತತ್ವಾನಾಂಸ್ಥಿತಿರೇಷಾ ಕಥಿತಾಸೃಷ್ಟಿಕ್ರಮೇಣಸರ್ವೇಷಾಂ ।
ಪ್ರತಿಲೋಮಂ ಪರಿಣಾಮಾನ್ಮಾಯಾಯಾಂತಾನಿಲೀಯಂತೇ ॥

ಟೀ॥ ಸರ್ವೇಷಾಂ—ಸಮಸ್ತಗಳಾಗಿರ್ಪ, ತತ್ವಾನಾಂ—ತತ್ವಗಳಿಗೆ, ಸೃಷ್ಟಿ ಕ್ರಮೇಣ—ಉತ್ಪತ್ತಿಕ್ರಮದಿಂದ, ಏಷಾಸ್ಥಿತಿಃ—ಈ ಸ್ಥಿತಿಯು, ಕಥಿತಾ—ಹೇಳಲ್ಪಟ್ಟಿತು. (ಇನ್ನು ಸಹ್ಮಾರಕ್ರಮವನ್ನು ಹೇಳುತ್ತಿಹನು). ತಾನಿ—ಆಕಾಲಾ ತತ್ವಂಗಳು, ಪ್ರತಿಲೋಮಂ—ತುದಿ ಮೊದಲಾಗಿ, ಪರಿಣಾಮಾತ್—ಪರಿಣಾಮ ದೆಸೆಯಿಂದ, ಮಾಯಾಯಾಂ—ಮಾಯೆಯಲ್ಲಿ, ಲೀಯಂತೇ—ಅಡಗುತ್ತಿಹವು.॥೬

ಶ್ಲೋ॥ ಮಾಯಾಯಾಃಪರತೋಽಧ್ವಾಶುದ್ಧಶ್ಶಕ್ತೌ ನಿಲೀಯತೇ ಸಕಲಃ
ಪರಮಾತ್ಮನಿ ಸಾಪಿ ಶಿವೇ ತಿಷ್ಠತ್ಯವಿಭಾಗಮಾಪನ್ನಾ ॥೬

ಟೀ॥ ಮಾಯಾಯಾಃ—ಮಾಯೆಯ ದೆಸೆಯಿಂದ, ಪರತಃ—ಅನ್ಯವಾಗಿರ್ಪ ಶುದ್ಧಃ—ಶುದ್ಧವಾಗಿರ್ಪ, ಸಕಲಃ—ಸಮಸ್ತವಾಗಿರ್ಪ, ಅಧ್ವಾ—ಮಾರ್ಗವ ಶಕ್ತೌ—ಮಹಾಮಾಯೆಯೆಂಬ ಶಕ್ತಿಯಲ್ಲಿ, ನಿಲೀಯತೆ—ಅಡಗುತ್ತಿಹುದ ಸಾಪಿ—ಆ ಮಹಾಮಾಯೆಯೂ, (ಅಪಿಶಬ್ದದಿಂದ ಅದೇ ಮಾಯೆಯೆಂದರ್ಥ ಶಿವೆ—ಶಿವನು, ತಿಷ್ಠತಿಸತಿ—ಅಧಿಷ್ಠಾತೃವಾಗುತ್ತಿರಲಾಗಿ, ಪರಂ—ಬರಿದೆ, ತ್ಮನಿ—ತನ್ನಲ್ಲಿಯೇ, ಅವಿಭಾಗಂ ಆಪನ್ನಾ—ಕಾರ್ಯರೂಪವಾದ ವಿಭಾಗವಿಲ್ಲದೆ ದ್ದಂತಹದಾಗಿ, ತಿಷ್ಠತಿ—ಇರುತ್ತಿಹುದು. ॥೬

ಇಲ್ಲಿ ತತ್ವಂಗಳು ಪ್ರತಿಲೋಮದಿಂದ ಮಾಯೆಯಲ್ಲಿ ಅಡಗುತ್ತಿಹವೆಂ ದಕ್ಕೆ ವಿವರವು ಹೇಗೆಂದೊಡೆ—ಪೃಥ್ವಿತತ್ವವು ತನಗೆ ಕಾರಣವಾದ ಗಂಧತನ್ಮಾತ್ರ ದಲ್ಲಿ, ಅಪ್ಪು ರಸತನ್ಮಾತ್ರದಲ್ಲಿ, ಅಗ್ನಿಯು ರೂಪತನ್ಮಾತ್ರದಲ್ಲಿ, ವಾಯುವು ಸ್ಪ ತನ್ಮಾತ್ರದಲ್ಲಿ, ಆಕಾಶವು ಶಬ್ದತನ್ಮಾತ್ರದಲ್ಲಿ, ಅಡಗುವುವು. ಆ ಪಂಚತನ್ಮಾತ್ರ ಗಳು ತಮಗೆ ಕಾರಣವಾದ ತಾಮಸಾಹಂಕಾರದಲ್ಲಿ ಅಡಗುವುವು. ಕರ್ಮೇಂ ಯಂಗಳು ರಾಜಸಾಹಂಕಾರದಲ್ಲಿ ಅಡಗುವುವು. ಮನಸ್ಸೂ ಜ್ಞಾನೇಂದ್ರಿಯಂಗಳ ಸಾತ್ವಿಕಾಹಂಕಾರದಲ್ಲಿ ಅಡಗುವುವು. ಅಹಂಕಾರವು ಬುದ್ಧಿಯಲ್ಲಡಗುವುದು. ಬುದ್ಧಿಯು ಗುಣತತ್ವದಲ್ಲಿ, ಆ ಗುಣತತ್ವವೂ ಶುದ್ಧವಿದ್ಯೆ ಈಶ್ವರತತ್ವ ಸದಾಶಿವ ಶಕ್ತಿತತ್ವಂಗಳೂ ಶಿವತತ್ವದಲ್ಲಿ ಅಡಗುವುವು. ಈ ಶಿವತತ್ವವೂ ಆ ಶುದ್ಧ ಮಾಯ ತತ್ವವೂ, ಪರಶಿವನು ನಿಮಿತ್ತಕಾರಣನಾಗಿ ಅಧಿಷ್ಠಿಸಿಕೊಂಡಿರಲಿಕ್ಕಾಗಿ ನಿರವ ವರೂಪದಿಂದ ಇಹವೆಂಬುದರ್ಥ.

ಇನ್ನು ಮಹಾಪ್ರಳಯದಲ್ಲಿ ಉಳಿದಿಹ ವಸ್ತುಗಳನ್ನು ಹೇಳುತ್ತಿಹನು.

ಶ್ಲೋ॥ ಮಾಯಾಪುರುಷಶ್ಶಿವ ಇತ್ಯೇತತ್ತ್ರಿತಯಂಮಹಾರ್ಥಸಹ್ಮಾರೇ
ಅವಶಿಷ್ಯತೇ ಪುನಸ್ತತ್ಪ್ರವರ್ತತೇ ಪೂರ್ವವತ್ಸೃಷ್ಟೌ ॥೬

ಟೀ॥ ಮಾಯಾ—(ತಂತ್ರೋಚ್ಚಾರಣದಿಂದ) ಮಾಯೆ ಮಹಾಮಾಯೆಗಳೆಂಬ ಉಪಾದಾನಕಾರಣಂಗಳೆರಡು, ಪುರುಷಃ (ಜಾತ್ಯೈಕವಚನವಾದ ಪುರುಷಶಬ್ದದಿಂದ) ಮಲಯುಕ್ತರಾದ ಸಮಸ್ತ ಜದ್ಧಾತ್ಮರುಗಳು, ಶಿವಃ—ಶಕ್ತಿಯುಕ್ತನಾದ ಶಿವನು, (ಶಿವಶಬ್ದದಿಂದ ಹೇಳಿಸಿಕೊಂಬ ಮುಕ್ತಾತ್ಮರುಗಳು) ಇತಿ—ಹೀಗೆಂಬ, ಏತತ್ತ್ರಿತಯಂ – ಈ ಮೂರು, ಮಹಾರ್ಥಸಂಹಾರೇ—ಮಹಾಪ್ರಳಯದಲ್ಲಿ, ಅವಶಿಷ್ಯತೇ—ಉಳಿವುತ್ತಿಹುದು. ಪುನಃ—ಮರಳಿ, ಸೃಷ್ಟೌ—ಸೃಷ್ಟಿಕಾಲದಲ್ಲಿ, ತತ್—ಆಮೂರು, ಪೂರ್ವವತ್ – ಮೊದಲೋಪಾದಿಯಲ್ಲಿ, ಪ್ರವರ್ತತೇ—ಪ್ರವರ್ತಿಸುತ್ತಿಹುದು. ॥೬೪॥

ಸಂಹಾರವನ್ನು ಮಾಡುವುದಕ್ಕೆ ಪ್ರಯೋಜನವನ್ನು ಹೇಳುತ್ತಿಹನು:—

ಶ್ಲೋ॥ ಸಂಸಾರೇ ಖಿನ್ನಾನಾಂ ನಿಖಿಲಾನಾಂ ಪ್ರಾಣಿನಾಂ ಪ್ರಭುಃ ಕೃ[ಪಯಾ ।
ಕುರುತೇ ಮಹಾರ್ಥಸಂಹೃತಿ ಮೇತೇಷಾಮೇವವಿಶ್ರಾಂತ್ಯೈ ॥

ಟೀ॥ ಪ್ರಭುಃ—ಪರಮೇಶ್ವರನು, ಸಂಸಾರೇ—ಸಂಸಾರದಲ್ಲಿ, ಖಿನ್ನಾನಾಂ-ನೋಯಲ್ಪಟ್ಟಂಥ, ನಿಖಿಲಾನಾಂ—ಸಮಸ್ತವಾದಂಥ, ಏತೇಷಾಂಪ್ರಾಣಿನಾಂ—ಈ ಪ್ರಾಣಿಗಳ, ವಿಶ್ರಾಂತ್ಯೈಏವ—ಬಳಲಿಕೆಯನಾರಿಸಲೋಸ್ಕರವೇ, ಕೃಪಯಾ—ದಯೆಯಿಂದ, ಮಹಾರ್ಥಸಂಹೃತಿಂ—ಮಹಾಪ್ರಳಯವನ್ನು, ಕುರುತೇ—ಮಾಡುತ್ತಿಹನು.

ಪ್ರಳಯಾನಂತರದಲ್ಲಿ ಮತ್ತೆ ಸೃಷ್ಟಿಯನ್ನು ಮಾಡುವುದಕ್ಕೆ ಪ್ರಯೋಜನವನ್ನು ಹೇಳುತ್ತಿಹನು,

ಶ್ಲೋ॥ ಕರ್ಮವಿಪಾಚನಹೇತೋಃಪಶುದಯಯಾಪುನರಪೀಹಪರಮೇಶಃ।
ಸೃಷ್ಟಿಂವಿಧಾಯತೇಷಾಂಕರ್ಮವಿಪಾಚಯತಿದೇಹಭೃತಾಂ ॥೭೦॥

ಟೀ ॥ ಕರ್ಮವಿಪಾಚನಹೇತೋಃ—ಕರ್ಮಪರಿಪಾಕಾರ್ಥವಾಗಿ, ಪಶುದಯಯಾ—ಪಶುಗಳ ಮೇಲಣ ಕೃಪೆಯಿಂದ, ಪರಮೇಶಃ—ಪರಮೇಶ್ವರನು, ಇಹ—ಇಲ್ಲಿ, ಪುನರಪಿ—ಮರಳಿಯೂ, ಸೃಷ್ಟಿಂ—ಸೃಷ್ಟಿಯನ್ನು, ವಿಧಾಯ—ಮಾಡಿ, ತೇಷಾಂದೇಹಭೃತಾಂ—ಆದೇಹಿಗಳ, ಕರ್ಮ—ಕರ್ಮವನ್ನು, ಪಾಚಯತಿ—ಭೋಗಿಸುವುದಕ್ಕೆ ಯೋಗ್ಯವನ್ನಾಗಿ ಮಾಡುತ್ತಿಹನು. ॥ ೭೦ ॥

ಶ್ಲೋ॥ ಭೋಗೇನಕರ್ಮನಾಶಂ ವಿಧಾಯದೀಕ್ಷಾಖ್ಯಯಾಶಕ್ತ್ಯಾ ।
ಮೋಚಯತಿಪಶೂನಖಿಲಾನ್ಕರುಣೈಕನಿಧಿಸ್ಸದಾಶಂಭುಃ ॥ ೭೧ ॥

ಟೀ ॥ ಕರುಣೈಕನಿಧಿಃ—ಕೃಪೆಗೆ ಮುಖ್ಯನಿಧಾನವಾಗಿರ್ಪ, ಶಂಭುಃ— ಪರಮೇಶ್ವರನು, ಭೋಗೇನ—ಭೋಗದಿಂದ, ಕರ್ಮನಾಶಂ—ಕರ್ಮಕ್ಷಯವನ್ನು, ವಿಧ

ಯ—ಮಾಡಿ, ದೀಕ್ಷಾಖ್ಯಯಾ—ದೀಕ್ಷೆಯೆಂಬ ಹೆಸರನುಳ್ಳ, ಶಕ್ತ್ಯಾ—ಶಕ್ತಿಯಿಂದೆ, ಅಖಿಲಾ—ಸಮಸ್ತವಾಗಿರ್ಪ, ಪಶೂ—ಪಶುಗಳನ್ನು, ಸದಾ—ಆವಾಗಲೂ, ಮೋಚಯತಿ—ಪಾಶವಿಮುಕ್ತರನ್ನು ಮಾಡುತ್ತಿಹನು.

ಕರ್ಮಭೋಗದಿಂದ ಮಲಪರಿಪಾಕವಾಗುತ್ತಿರಲಾಗಿ ಸಂಚಿತ ಆಗಾಮಿ ಕರ್ಮಗಳಿಗೆ ಒಂದೇವೇಳೆ ಪಾಕವು ಸಂಬಂಧಿಸುವುದರಿಂದ, ಆಚಾರ್ಯನು ಮಾಡುವ ದೀಕ್ಷಾರೂಪವಾದ ಕ್ರಿಯೆಯಿಂದ ಆ ಉಭಯಕರ್ಮವನ್ನೂ ಕೆಡಿಸಿ, ಮಲಾದಿ ಪಾಶಂಗಳ ದೆಸೆಯಿಂದ ಪಶುಗಳನ್ನು ಶಿವನು ಬಿಡಿಸುವನೆಂಬುದರ್ಥ. ॥೩೧॥

ಶರೀರ ಮೊದಲಾದುವಕ್ಕೆ ತತ್ವಂಗಳೆಂಬ ಗಣನೆಯೇಕಿಲ್ಲವೆಂದೊಡೆ, ಆ ಶರೀರ ಮೊದಲಾದುವಕ್ಕೆ ತತ್ವಲಕ್ಷಣವಿಲ್ಲವಾಗಿ ತತ್ವಂಗಳಲ್ಲವೆಂದು ಹೇಳುತ್ತಿಹನು :—

ಶ್ಲೋ॥ ಆಪ್ರಳಯಂಯತ್ತಿಷ್ಠತಿಸರ್ವೇಷಾಂಭೋಗದಾಯಿಭೂತಾನಾಂ ।
ತತ್ತತ್ವಮಿಹಪ್ರೋಕ್ತಂ ನಶರೀರಘಟಾದಿ ತತ್ವಮತಃ ॥ ೩೦ ॥

ಟೀ॥ ಯತ್—ಆವವಸ್ತುವು, ಆಪ್ರಳಯಂ—ಮಹಾಪ್ರಳಯಪರ್ಯಂತವಾಗಿ, ತಿಷ್ಠತಿ—ಇರುತ್ತಿಹುದೋ, ಸರ್ವೇಷಾಂ—ಸಮಸ್ತವಾಗಿರ್ಪ, ಭೂತಾನಾಂ—ಪ್ರಾಣಿಗಳಿಗೆ, ಭೋಗದಾಯಿ—ಭೋಗವನ್ನು ಕೊಡುವಂತಹದೋ, ತತ್—ಅದು, ತತ್ವಂ—ತತ್ವವೆಂದು, ಇಹ—ಈಶಿವಾಗಮದಲ್ಲಿ, ಪ್ರೋಕ್ತಂ— ಹೇಳಲ್ಪಟ್ಟಿತು, ಅತಃ—ಈಕಾರಣದಿಂದ, ಶರೀರಘಟಾದಿ—ಶರೀರಘಟ ಮೊದಲಾಗಿರ್ಪಂತಹದು, ತತ್ವಂ—ತತ್ವವು, ನ—ಅಲ್ಲ.

ಶ್ಲೋ॥ ತತ್ವಂಭವತಿಯತೋಯತ್ಕಾರಣಮಾಪೂರಕಂಚತತ್ತಸ್ಯ ।
ಕಥಿತಾವ್ಯವಸ್ಥಿತಿರಿಯಂ ನಿಖಿಲಾನಾಮೇವ ತತ್ವಾನಾಂ ॥ ೩೩ ॥

ಟೀ ॥ ಯತಃ— ಆವುದಕ್ಕೆ, ಯತ್—ಆವುದು, ಕಾರಣಂ—ಕಾರಣವೂ, ಆಪೂರಕಂಚ—ಹೆಚ್ಚಿಸುವಂತಹದೂ, ಭವತಿ—ಆಗುತ್ತಿಹುದೋ, ತತ್—ಆಪೂರಕವಾಗಿರ್ಪಂತಹದು, ತಸ್ಯ— ಆಕಾರ್ಯವಾಗಿರ್ಪಂತಹಗಕ್ಕೆ, ತತ್ವಂ— ತತ್ವವು, ನಿಖಿಲಾನಾಂ—ಸಮಸ್ತವಾಗಿರ್ಪ, ತತ್ವಾನಾಂ—ತತ್ವಂಗಳಿಗೆ, ಇಯಮೇವವ್ಯವಸ್ಥಿತಿಃ—ಈಯಿರವೇ, ಕಥಿತಾ—ಹೇಳಲ್ಪಟ್ಟಿತು. ॥ ೩೩ ॥

ಆರಿಂದ ಈ ಪ್ರಕರಣವು ಮಾಡಲ್ಪಟ್ಟಿತೆಂದರೆ ಹೇಳುತ್ತಿಹನು :—

ಶ್ಲೋ॥ ತತ್ವಾನಾಮುಹಿತತ್ವಂ ಯೇನಾಖಿಲಮೇವ ಹೇಳಯಾಕಲಿತಂ ।
ಶ್ರೀಭೋಜದೇವನೃಪತಿ ರ್ವ್ಯಧತ್ತ ತತ್ವಪ್ರಕಾಶಂ ಸಃ ॥ ೩೪ ॥

ಟೀ ॥ ಯೇನ—ಆವನಾನೊಬ್ಬನಿಂದ, ತತ್ವಾನಾಂಅಖಿಲಂತತ್ವಂ—ಸಮಸ್ತ ತತ್ವಗಳ ಸ್ವರೂಪವು, ಹೇಳಯೈವ—ಲೀಲೆಯಿಂದಲೇ, ಕಲಿತಂ— ಅರಿಯಲ್ಪಟ್ಟಿ

ತೋ, ಸಶ್ರೀಭೋಜದೇವನೃಪತಿಃ— ಆ ಭೋಜರಾಜನು, ತತ್ವಪ್ರಕಾಶಂ—ತತ್ವಪ್ರಕಾಶವನ್ನು, ವ್ಯಧತ್ತ—ಮಾಡಿದನು. ॥೭೪॥

ಶ್ಲೋ॥ ಯಸ್ಯಾಖಿಲಂ ಕರತಳಾಮಳಕಕ್ರಮೇಣ ದೇವಸ್ಯ ವಿಸ್ಫುರತಿ
ಚೇತಸಿತತ್ವಜಾತಂ । ಶ್ರೀಭೋಜದೇವನೃಪತಿಸ್ಸಶಿವಾ
ಗಮೋಕ್ತಂ ತತ್ವಪ್ರಕಾಶ ಮಸಮಾನ ಮಿದಂ ವ್ಯಧತ್ತ ॥ ೭೫ ॥

ಟೀ ॥ ಯಸ್ಯ—ಆವನಾನೊಬ್ಬ, ದೇವಸ್ಯ— ರಾಜನ, ಚೇತಸಿ—ಚಿತ್ತದಲ್ಲಿ, ಅಖಿಲಂತತ್ವಜಾತಂ— ಸಮಸ್ತತತ್ವಸಮೂಹವು, ಕರತಳಾಮಳಕಕ್ರಮೇಣ—ಅಂಗೈಯ್ಯೊಳಗಣನೆಲ್ಲಿಯಕಾಯೋಪಾದಿಯಿಂದ, ವಿಸ್ಫುರತಿ— ಪ್ರಕಾಶಿಸುತ್ತಿಹುದೋ, ಸಶ್ರೀಭೋಜದೇವನೃಪತಿಃ—ಆ ಭೋಜದೇವನೆಂಬ ಅರಸು, ಶಿವಾಗಮೋಕ್ತಂ—ಶಿವಾಗಮಂಗಳಲ್ಲಿ ಹೇಳಲ್ಪಟ್ಟ, ಅಸಮಾನಂ—ಅಪ್ರತಿಯಾಗಿರ್ಪ, ಇದಂತತ್ವಪ್ರಕಾಶಂ—ಈ ತತ್ವಪ್ರಕಾಶವನ್ನು, ವ್ಯಧತ್ತ—ಮಾಡಿದನು. ॥೭೫॥

———:o:———

ಚಂ॥ ತ್ರಿಭುವನಭೋಗಮಂ ತೃಣಲವಕ್ಕೆಣೆಮಾಡಿ ಬಿಸುಟ್ಟು ಲಿಂಗಸ ।
ತ್ಪ್ರಭೆಯೊಳನನ್ಯನಾಗಿ ಬೆರೆದದ್ವಯಸದ್ವಯಕಗ್ರನಾದ ಮ ॥
ತ್ಪ್ರಭು ಗುರುಚಿತ್ಕಳೇವರ ನಿರಂಗ ಪರಾತ್ಪರ ಚೆನ್ನವೀರವಿ ।
ದ್ವಿಭುವಿನ ಪಾದವೆನ್ನ ಹೃದಯಾಂಬುಜಮಧ್ಯದೊಳಿರ್ಕೆ ಸಂತತಂ ॥

ಸ್ರ॥ ಆನಂದಂಬೆತ್ತುಘೋರಾರ್ಯರು ಮೊದಲೊಳು ತತ್ವಪ್ರಕಾಶಕ್ಕೆ ಸದ್ವ್ಯಾ।
ಖ್ಯಾನಂಗೆಯ್ದಿರ್ದುದಂ ಷಟ್ಸ್ಥಲಪರಶಿವ ನೀಚೆನ್ನವೀರೇಶಹಸ್ತ ॥
ಜ್ಞಾನಾಂಭೋಜಾತಗರ್ಭೋದ್ಭವ ವಿರತ ಮಹಾಪರ್ವತೇಶಾಗ್ರಗಣ್ಯಂ ।
ನಾನಾಭಕ್ತಾರ್ಥದಿಂ ಕನ್ನಡಿಸ ಲಿಳೆಯೊಳೀಸಾಧನಂ ಸೇವ್ಯಮಲ್ತೇ ॥

ತತ್ವಪ್ರಕಾಶಿಕಾ ಟೀಕೆಯು ಮುಗಿದುದು.

ಮಂಗಳಂ.



